# ದಿವ್ಯ ಪ್ರೇಮ



ಹಿತ್ತಿಲಮನೆ ವೀರಭದ್ರರು

ಒಕ್ಕಲತನದ ವಿದ್ಯಾನಿಲಯ ಪುಣೆ.

ಪ್ರಕಾಶಕರು:-

ಮಾಧವ ಬಲ್ಲಾಳ ಬಂಧುಗಳು.

ಧಾರವಾಡ.

ಬೆಲೆ.— ೦—೮—೦

# ಅರಿಕೆ.



ಶ್ರೀಮತಿ ಸೀತಾದೇವಿಯವರು ಬಂಗಾಳಿಯಲ್ಲಿ ಬರೆದ ಕತೆಗಳು ಇವುಗಳಲ್ಲಿ ಚಿತ್ರಿಸಿರುವ ಪ್ರೀತಿ ದಿವ್ಯಪ್ರೀತಿ. ಈ ಪ್ರೀತಿಯನ್ನೇ ಬಾಳಿನಲ್ಲಿ ಕಂಡು ಆನಂದಿಸತಕ್ಕದ್ದಾಗಿದೆ

ಆದರೆ ಲೋಕದಲ್ಲಿ ವ್ಯಾಪಾರೀ ಬುದ್ಧಿಯು ಪ್ರಬಲವಾಗಿ ಈ ಕತೆಗಳಲ್ಲಿ ಕಾಣಿಸಿದ ಅವ್ಯಕ್ತ ಸದೃಶ ಪ್ರೀತಿಯು ಕಣ್ಮರೆಯಾಗುತ್ತಿದ್ದು ದುರ್ದೈವ

ಇಂತಹ ಕತೆಗಳನ್ನು ಗಂಡು, ಹೆಣ್ಣು ಮಕ್ಕಳು ಓದಿ ತಮ್ಮ ದೃಷ್ಟಿಯನ್ನು ಪವಿತ್ರಮಾಡಿಕೊಳ್ಳಬಹುದಾಗಿದೆ. ತಾಯ ಬೆಲೆಯೆ ತಿಳಿಯದೆ ಅವಳಿಗೆ ಅನ್ಯಾಯ ಬಗೆವ ಪಾಪವು ಹಲವರಿಂದ ತಿಳಿಯದೆಯೆ ಆಗುತ್ತದೆ, ಆದರೆ ಚಿಕ್ಕಂದು ತಾಯಿ, ಸಾಕಿ ಸಲುಹಲು, ಪಡುವ ಕಷ್ಟಗಳ ಅರಿವು ಉಂಟಾದರೆ ಮಕ್ಕಳು ದೊಡ್ಡವರಾದ ಬಳಿಕ ತಾಯಲ್ಲಿ ತಮ್ಮ ಆದರ ಪ್ರೀತಿಗಳನ್ನು ಎಂದೂ ಕಳೆದುಕೊಳ್ಳಲಾರರು ಇದರಿಂದ ಬಾಳಿನಲ್ಲಿ ನೆಮ್ಮದಿಯು ಹೆಚ್ಚಿ ಸಂಸಾರಿಕ ಸೌಖ್ಯವು ದೊರೆಯಲು ಸಹಾಯವಾಗುವುದೆಂಬ ಭಾವನೆಯಿಂದ ನನ್ನ ಸೋದರ ಸೋದರಿಯರಿಗೆ ಈ ನನ್ನ ಅಲ್ಪ ಕಾಣಿಕೆಯನ್ನು ಸಲ್ಲಿಸುತ್ತಿದ್ದೇನೆ

ಹಿಂ. ವೀ.

# ತಾಯಿ

ಇರುಳು ಕತ್ತಲೆಯೊಂದಿಗೆ ಮೆಲ್ಲಮೆಲ್ಲನೆ ಹಿಂದೆ ಸರಿಯುತ್ತಿತ್ತು. ಹಣತೆಯಲ್ಲಿ ಎಣ್ಣೆ ತೀರಿದಾಗ ಜ್ಯೋತಿ ನಂದಿ ಉರಿಯು ಬತ್ತಿಯ ತುದಿಯು ಕೆಂಪಗೆ ಪ್ರಜ್ವಲಿಸುವಂತೆ ಮೂಡಣದ ಬಾನಿನಲ್ಲಿ ಬೆಳ್ಳಿ ಬೆಳಗುತ್ತಿತ್ತು. ಮಂದ ಸಿಲನು ಮಂದಮಂದವಾಗಿ ಸುಳಿಯಲುಪಕ್ರಮಿಸಿದ್ದನು. ನಗರ ಶೋಧಿಸುವರ ಹೊಲಸನ್ನು ಚೆಲ್ಲುವ ಬಂಡಿಗಳು ಸದ್ದುಮಾಡಿ ನಿದ್ರೆಯಲ್ಲಿ ಮೈಮರೆತ ನಗರವನ್ನೆಲ್ಲ ಜಾಗ್ರತವನ್ನಾಗಿ ಮಾಡುತ್ತಿದ್ದವು ಆಗ ಕಮಲಾ ಎಚ್ಚತ್ತಳು; ಅದೇ ಸಮಯಕ್ಕೆ ಸರಿಯಾಗಿ ಅವಳ ಪಕ್ಕದಲ್ಲಿ ಮಲಗಿದ ಪುಟ್ಟ ಕೂಸೂ ಎಚ್ಚತ್ತಿತು. ಎಲೆವನೆಗಳಲ್ಲಿ ಪಕ್ಷಿಗಳು ಸರಸದಿಂದ ನಲಿದಾಡುವಂತೆ ತಾಯಿ ಮಗಳು ಹಾಸಿಗೆಯಲ್ಲಿ ಆಟವಾಡಲು ಮೊದಲುಮಾಡಿದರು. ಕೋಣೆಯಲ್ಲಿ ಇನ್ನೂ ಕತ್ತಲೆಯಿತ್ತು. ಪಕ್ಷಿ ಮರಿಯೊಂದು ಗೂಡಿನಲ್ಲಿ ರೆಕ್ಕೆಗೆದರಿ ಚಟಪಡಿಸುವಂತೆ ಪುಟ್ಟ ಕೂಸು ಹಾಸಿಗೆಯಲ್ಲಿಯೆ ಕಾಲು ಬಡಿದು ಕೈ ಕುಣಿಸುತ್ತ ತಾಯಿಯ ಮುಖವನ್ನೇ ದಿಟ್ಟಿಸುತ್ತಿತ್ತು. ಕಮಲಾ ಆಕೆಗೆ ಮುತ್ತನೊಂದು ಕೊಟ್ಟು ಸಡಲಿದ ಸೀರೆಯ ನೀರಿಗೆಗಳನ್ನು ಎಡಗೈಯಿಂದ ಹಿಡಿದುಕೊಂಡು ಎದ್ದಳು. ಅತ್ತಿತ್ತ ಸರಿದ ಹೊದಿಕೆಗಳನ್ನು ಪುನಃ ಸರಿಯಾಗಿ ಮಕ್ಕಳ ಮೈತುಂಬ ಹೊದೆಯಿಸಿದಳು. ರಾತ್ರಿ ಮಲಗುವಾಗ ಪ್ರತಿಯೊಬ್ಬರಿಗೂ ಒಂದೊಂದು ಛಾದರವನ್ನು ಹೊಚ್ಚಿ ಮಲಗಿಸುತ್ತಾಳೆ. ಬೆಳಿಗ್ಗೆ ಎದ್ದು ನೋಡಿದಾಗ ಅವೆಲ್ಲವು ಒಂದು ಮೂಲೆಯಲ್ಲಿ ಗುಡ್ಡೆಯಾಗಿ ರಾಶಿ ಬೀಳುತ್ತಿದ್ದವು. ಹೀಗೆ ರಾಶಿಯಾಗಿ ಬೀಳುವದು ಆಕೆಗೊಂದು ಸಮಸ್ಯೆಯಾಗಿ ಬಿಟ್ಟಿತ್ತು. ಬೆಳಕು ಮತ್ತು ಸುಳಿಗಾಳಿಯಿಂದ ಪತಿಯ ನಿದ್ರೆಗೆ ಭಂಗ ಬಂದೀತೆಂದು ಕಮಲಾ ಆತನ ಪಾಡದ ಒಳಿಯಲ್ಲಿರುವ ಕಿಡಕಿಯನ್ನು ಮುಚ್ಚಿದಳು. ಮತ್ತೆ ಹಾಸಿಗೆಯಲ್ಲಿ ಪವಡಿಸಿ ಚಂಪುವನ್ನು ಎದೆಗೆ ಅಪ್ಪಿಕೊಂಡು, ಆಕೆಯ ಪುಟ್ಟ ಪಾದಗಳನ್ನು ಸೇವರಿಸುತ್ತ, ಚಂಪಕದ ಮೊಗ್ಗುಗಳಂತಿದ್ದ ಆಕೆಯ ಕಾಲ್ಬೆರಳುಗಳನ್ನು ದಿಟ್ಟಿಸುತ್ತಿದ್ದಳು. ಬೆಳಗಿನಲ್ಲಿಯೇ ಆಕೆಗೆ ಸ್ವಲ್ಪ ಬಿಡುವು. ಕಮಲಾ ಮುಗುಳು ನಗೆ ನಕ್ಕರೆ, ಚಂಪು ಕೇಕೆ

ಹಾಕಿ ನಗುತ್ತಿದ್ದಳು. ಆಗ ಕಮಲಾ "ಹುಚ್ಚೆ ಕೆಟ್ಟ ಹುಡುಗಿ, ಏ, ನೀನೆ ಗದ್ದಲ ಮಾಡಿ ನಿಮ್ಮ ತಂದೆಯನ್ನೆಬ್ಬಿಸಿಯೇನೆ" ಎಂದು ಕಿರುದನಿಯಲ್ಲಿ ಕಿರುಚಿದಳು. ಆದರೆ ಚಂಪುವಿಗೆ ಆದರ ಅರುವೆಲ್ಲಿ? ಮೊಗ್ಗುವಿನಂತಿದ್ದ ಕಣ್ಣುಗಳನ್ನು ಪಿಳುಕಿಸುತ್ತ ಚಲ್ಲಾಟವಾಡುತ್ತಿದ್ದಳು.

ಆಕೆಯ ಸ್ವಾಮಿ ಮಲಗುವದು ಮಂಚದ ಮೇಲೆ; ಅದರ ಪಕ್ಕದಲ್ಲಿಯೇ ಕೋಣೆತುಂಬ ಹಾಸಿಗೆ ಹಾಕಿರುತ್ತಿತ್ತು. ಮಂಚದ ಕೆಳಗಡಲ್ಲಿ ಕಮಲಾ ಚಂಪುವಿನೊಂದಿಗೆ ಮಲಗುತ್ತಾಳೆ. ನಂತರ ಕ್ರಮವಾಗಿ ಲಕ್ಕಿ, ರಾಣು, ಮೋನ್ಯಾ, ಶೋಭಾ ಮಲಗುವರು. ಅವರಲ್ಲಿ ಚಂಪಾ ತೀರ ಚಿಕ್ಕವಳು; ಶೋಭಾ ಹಿರಿಯಳು ವಯಸ್ಸು ಹೆಚ್ಚಾದಂತೆಲ್ಲ ತಾಯಿಯಿಂದ ಹೆಚ್ಚೆಚ್ಚು ದೂರದಲ್ಲಿ ಮಲಗಬೇಕು. ಮಲಗಿಕೊಳ್ಳುವಾಗ ಪ್ರತಿಯೊಬ್ಬರೂ ತಮ್ಮ ತಮ್ಮ ಹಾಸಿಗೆಗಳ ಗಡಿಗಳನ್ನು ಅರಸರು ತಮ್ಮ ನಾಡುಗಳ ಗಡಿಗಳನ್ನು ನಿಶ್ಚಯಿಸಿಕೊಳ್ಳುವದಕ್ಕಿಂತ ಹೆಚ್ಚಾದ ದಕ್ಷತೆವಹಿಸಿ ನಿಶ್ಚಯಿಸಿಕೊಳ್ಳುವರು. ಲಕ್ಕಿಗೆ ನಾಲ್ಕುವರ್ಷಗಳು, ಆತನಿಗೆ ತಲೆಯ ಕಡೆಗೆ ಎರಡು, ಕಾಲಿನ ಕಡೆಗೆ ಎರಡು ಹೀಗೆ ನಾಲ್ಕು ದಿಂಬುಗಳು ಬೇಕು. ರಾಣು ಸಾಕ್ಷಾತ್ ದೇವಿ ಸ್ವರೂಪದವಳು. ಆಕೆಗೆ ಆರು ವರ್ಷಗಳು. ತನಗೊಂದೂ ದಿಂಬು ಬೇಡವೆಂದು ಹೇಳುತ್ತಿದ್ದಳು. "ಅವ್ವಾ, ಇನ್ನೂ ತಲೆಯ ಕಡೆಗೆ ಎರಡು, ಕಾಲ ಕಡೆಗೆರಡು ದಿಂಬು ಇಟ್ಟುಕೊಂಡು ಮಲಗಲಿಕ್ಕೆ ನಾನೇನೂ ಲಕ್ಕ್ಯಾನಷ್ಟು ಸಣ್ಣವಳಲ್ಲ; ನಾನೆಂದೂ ಉರುಳಿ ನೆಲದ ಮೇಲೆ ಹೋಗುವದಿಲ್ಲ. ಆ ದಿಂಬುಗಳೆಲ್ಲವೂ ಅವನಿಗೇ ಇರಲಿ" ಆಕೆಯ ಹೇಳಿಕೆ. ಎಲ್ಲರಲ್ಲಿಯೂ ಉಡಾಳನೆಂದರೆ ಮೋನ್ಯಾ (ಮೋಹನ). ನಿದ್ರೆಯಲ್ಲಿರುವಾಗ ಬಡಪಾಯಿ ಶೋಭಾಳನ್ನು ಒದೆಯುತ್ತ ಬಂಡಿಗಾಲಿ ಉರುಳುವಂತೆ ಆಕೆಯ ಮೇಲೆ ಉರುಳುವನು. ಶೋಭಾ ಎಷ್ಟೆಂದರೂ ಹಿರಿಯ ಮಗಳು; ಸ್ವಲ್ಪವಾದರೂ ತಕರಾರು ಮಾಡಿದರೆ ಎಲ್ಲಿ ತನ್ನ ಹಿರಿಯತನಕ್ಕೆ ಕೊರತೆ ಬರುವದೊ ಎಂದುಕೊಂಡು ಸುಮ್ಮನಿರುತ್ತಿದ್ದಳು. ತಮ್ಮನು ನಿದ್ರೆಯಲ್ಲಿ ಒದೆದರೆ ಯಾರೇನು ಮಾಡಬೇಕು? ಆದರೂ ಒಂದೊಂದು ಸಲ "ಅವ್ವಾ, ಆತನ ಪಕ್ಕದಲ್ಲಿ ನಾನು ಇನ್ನು ಮಲಗಲಾರೆ, ಬಂಡಿಗಾಲಿಯ ಹಾಗೆ ಮೈಮೇಲೆಯುರುಳುತ್ತಾನೆ" ಎಂದು ತಾಯಿಯಲ್ಲಿ ಹೇಳಿಕೊಳ್ಳುವಳು. ಆವರೂ ರಾತ್ರಿಯಲ್ಲಿ ಆಕೆಗಾಗಿ ಬೇರೆ ಹಾಸಿಗೆ ಮಾಡಬೇಕೆಂದಾಗ ಹಾಗೆ ಮಾಡಗೊಡದೆ ಪುನಃ ಮೊದಲಿನ ಸ್ಥಾನದಲ್ಲಿಯೇ ಮಲ

ಗುತ್ತಿದ್ದಳು. ಮಲಗುವಾಗ ಎಲ್ಲರೂ ಸರಿಯಾಗಿ ಮಲಗುತ್ತಾರೆ ರಾತ್ರಿಯಲ್ಲಿ ಮೋನ್ಯಾ ಉರುಳುವದಕ್ಕೆ ಮೊದಲು ಮಾಡಿದರೆ ಎಲ್ಲ ಹಾಸಿಗೆಗಳೂ ರಾಶಿಯಾಗಿ ಒಂದೆಡೆ ಬೀಳುವವು. ಆಗ ಎಲ್ಲರೂ ನೆಲದ ಮೇಲೆಯೆ; ಮೋನ್ಯಾನ ಒಂದು ಕಾಲು ಹಾಸಿಗೆಗಳ ರಾಶಿಯಲ್ಲಿ ಬಂಧಿಯಾಗಿದ್ದರೆ ಇನ್ನೊಂದು ಲೋಭಾಳ ಮೈಮೇಲೆ ತಾಂಡವವಾಡುತ್ತಿತ್ತು.

ರಾತ್ರಿಯಲ್ಲಿ ಚಂಪೂ ಏಳುವಳು, ಆಗ ಕಮಲಳಿಗೆ ಎಚ್ಚರವೇ ಇರುತ್ತಿರಲಿಲ್ಲ ಕೂಸು ಅಳುವದು, ಆಗ ಕಮಲಾ ಎದ್ದು ಮೊಲೆಯುಣ್ಣಿಸಿ ಸೀರೆಯ ನೀರಿಗೆಗಳನ್ನು ಒಡ್ಯಾಣದಲ್ಲಿ ಸಿಕ್ಕಿಸಿಕೊಂಡು ಚಲ್ಲಾಪಿಲ್ಲಿಯಾದ ಕೂದಲು ಕಟ್ಟಿಕೊಳ್ಳುತ್ತ ಮಕ್ಕಳ ಕಡೆಗೆ ನೋಡುವಳು ಆಗ ಪ್ರತಿಯೊಬ್ಬರಿಗೂ ತಟ್ಟುತ್ತ, ಸೇರಿಸುತ್ತ ಮುದ್ದುಕೊಡಬೇಕೆನ್ನಿಸುವದು ಆದರೆ ಸಮಯವೆಲ್ಲಿ? ಲಕ್ಕಿಯನ್ನು ಸರಿಯಾಗಿ ಮಲಗಿಸಿ ಅವನ ದಿಂಬುಗಳನ್ನು ಸರಿಯಾಗಿ ಇಡುತ್ತಿದ್ದಳು ರಾಣು ಮಾತ್ರ ಮೊದಲು ಮಲಗಿದಾಗ ಮಲಗಿದಂತೆಯೇ ಈಗಲೂ ಮಲಗಿರುತ್ತಿದ್ದಳು. ಆಕೆ, ಕೊಂಕುಳಲ್ಲಿ ಅವಚಿ ಹಿಡಿದ ಕಪ್ಪುರ ಗೊಂಬೆಯೂ ಹಾಗೆಯೇ ಸ್ವಸ್ಥವಾಗಿ ಅಲ್ಲಿಯೇ ಸಿದ್ರೆಯೋಗಿತ್ತು. ಮೋನ್ಯಾನನ್ನು ನೆಲದ ಮೇಲಿಂದ ಹಿತಕರವು ಹಾಸಿಗೆ ಪುನಃ ಸರಿಯಾಗಿ ಹಾಸಿ ಮಲಗಿಸುತ್ತಿದ್ದಳು ಆವನು ಪುನಃ ಗಾಳಿಗಳನ್ನು ಒದೆಯುತ್ತ "ಗೋಲ, ಗೋಲ" ಎಂದು ಹಿಂದಿನ ದಿನವೆಲ್ಲ ಫುಟಬಾಲ ಆಡಿದ್ದರಿಂದ ನಿದ್ದೆಗಣ್ಣಿನಲ್ಲಿ ಕನವರಿಸುತ್ತಿದ್ದನು.

ಪ್ರಾತಃಪ್ರಕಾಶ ಗೋಡೆಗಳ ಮೇಲೆಲ್ಲ ಬಿದ್ದಿತ್ತು. ಯಾರೂ ಇನ್ನೂ ಎಚ್ಚತ್ತಿರಲಿಲ್ಲ ಪಂಜರದಲ್ಲಿಯ ಗಿಳಿಯು ಪಕ್ಕಗೆದರಿ ಚಟಪಡಿಸಿತು; ಗದ್ದಲ ಮಾಡಬೇಡವೆಂದು ಅದಕ್ಕೆ ಎಚ್ಚರಿಕೆ ಕೊಡುತ್ತ ಕಮಲಾ ಅಟ್ಟದಿಂದ ಇಳಿದು ಬಂದು ಆ ಮಕ್ಕಳನ್ನು ಎಬ್ಬಿಸಿದಳು ಮೋಧು ಎಂದೂ ತೀವ್ರವಿದ್ದವನಲ್ಲ ಎಲ್ಲರು ಏಳುವ ಮೊದಲೆ, ಪಾವಟಣಿಗೆಗಳನ್ನು ತೊಳೆದು, ನೆಲಸಾರಿಸಿ ಅಂಗಳಕ್ಕೆ ನೀರಿನ ಧಳಿಹೊಡೆಯಬೇಕು. ಇಲ್ಲವಾದರ ಇನ್ನೂ ಹಸಿಯಿರುವಾಗಲೇ ಎಲ್ಲರೂ ತುಳಿದು ಕೊಳೆಮಾಡುವರು. ಅದಕ್ಕಾಗಿ ನಿತ್ಯ ಎಷ್ಟೋ ಕೊಡ ನೀರ ವ್ಯರ್ಥವಾಗುವದು. ಹಲವಾರು ಸಲ ಆಕೆಯ ಸ್ವಾಮಿಯೇ ಚೇಷ್ಟೆ ಮಾಡಿದ್ದ; "ಒಬ್ಬೊಬ್ಬರು ಇಷ್ಟು ನೀರು ಬರಿಯ ಪಾವಟಣಿಗೆಗಳನ್ನು ತೊಳೆದು, ಸಳಸಳಿಸಿ, ಅಂಗಳ [illegible] ಕ್ಕೆ ನೆಚ್ಚಮಾಡ

ದರೆ, ನಗರ ಸಭೆಯವರು ನೀರು ಪೂರೈಸುವ ಬಗೆಯಾದರೂ ಹೇಗೆ?'' ಕಮಲಳೂ ಅದಕ್ಕೆ ಉತ್ತರ ಕೊಟ್ಟಿರದೇ ಇರಲಿಲ್ಲ

" ಎಲ್ಲರೂ ಹೀಗೇಕೆ ವೆಚ್ಚಮಾಡಿಯಾರು ? ಹಿಂದೂಗಳಾದವರು ಮಾತ್ರ ಹೀಗೆ ಮಾಡುವರು."

ಕಮಲಾ ಮೋಥನನ್ನು ಹೊರಳಾಡಿಸಿ ಎಬ್ಬಿಸಿ'' ಸೋಮಾರಿ, ಏಳು; ನಲ್ಲಿಯಲ್ಲಿ ಸುಮ್ಮನೇ ನೀರು ಹರಿಯುವದು'' ಎಂದು ಕೇಳಿದಳು " ಎದ್ದೆ, ತಾಯಿ" ಎಂದೆನ್ನುತ್ತ ಆತನು ಹಾಗೆಯೇ ಹಾಸಿಗೆಯಲ್ಲಿ ಒಂದು ಮಗ್ಗಲಿಂದ ಹೊರಳಿ ಇನ್ನೊಂದು ಮಗ್ಗಲಲ್ಲಿ ಮಲಗಿಬಿಟ್ಟನು

ಕಮಲಾ ಬಕೆಟ್ಟ, ಮತ್ತು ಕಸಬರಿಗೆಗಳನ್ನು ಹಿಡಿದುಕೊಂಡು ಸ್ವತಃ ತಾನೇ ತೊಳೆಯುವದಕ್ಕೆ ನಿಲ್ಲುವಳು. ತಾನು ತೊಳೆಯುವ ಸಪ್ಪಳ ಕೇಳ ಬಂದಹೊರತು ಆತನು ಏಳಲಾರನೆಂದು ಆಕೆಗೆ ಗೊತ್ತು. ಯಜಮಾನಿ ಕೆಲಸಮಾಡುತ್ತಿರಲು ತಾನು ಹಾಳುಹಾಸಿಗೆಯಲ್ಲಿ ಬಿದ್ದು ಹೊರಳಾಡುವದಕ್ಕೆ ಮನಸ್ಸಿರದೆ ಆಗ ಅವನು ಎದ್ದು ಕಣ್ಣುಜ್ಜುತ್ತ ಬರುತ್ತಿದ್ದ. ಕಂಗಳಲ್ಲಿ ಪಿಚ್ಚು ಇನ್ನೂ ಹಾಗೆಯೇ ಇರುತ್ತಿತ್ತು. ಕಮಲಗಳಿಂದ " ತಾಯಿ ಅದನ್ನು ಕೊಡಿರೆಂ"ದು ಕಸಬರಿಗೆ ತಕ್ಕೊಂಡು ತಾನೇ ತೊಳೆಯಲು ನಿಂತನು.

ಕಮಲಾ ಅಡಿಗೆ ಮನೆಯ ಬಾಗಿಲ ತೆರೆದು ಒಳಗೆ ಹೋದಳು. ಎಲ್ಲವೂ ಹಿಂದಿನ ದಿನ ಇಟ್ಟಂತೆ ಇದ್ದವು. ಸುದೈವಕ್ಕೆ ಸರಿಯಾಗಿ ಬೆಕ್ಕು ಹಿಂದಿನ ರಾತ್ರಿ ತನ್ನ ಹಾವಳಿ ನಡೆಸಿದಂತೆ ತೋರಲಿಲ್ಲ ಹಾಗೆಯೇ ಬಾಗಿ, ಒಲೆಯೊಳಗಿಂದ ಸ್ವಲ್ಪ ಬೂದಿಯನ್ನು ತಕ್ಕೊಂಡು ಹೊರಗೆಬಂದು ಉಜ್ಜಿದಳು. ನವಸಾಗರಿ ತೆಗೆ ಒಪ್ಪವ ಬ್ರಶ್ಶು ಮತ್ತು ಹಲ್ಲಪುಡಿ ಇವು ... ತೆಗೆ ಸೇರುತ್ತಿರಲಿಲ್ಲ ಮುಖ ಚೆನ್ನಾಗಿ ತಿಕ್ಕಿ ತೊಳೆದುಕೊಂಡು ಬಾವಲಿ ... ಪಟ್ಟು ಮತ್ತು ಹೊಸ್ತಿಲುಗಳಿಗೆ ನೀರು ಹಾಕಿ ಮಹಡಿಯ ಮೇಲೆ ಹೋದಳು. ಹಾಗೆಯೇ ಅತ್ತೆಯ ಕೋಣೆಯಲ್ಲಿ ಇಣಿಕಿ ಹಾಕಿ '' ಅತ್ತೆಯವರೇ, ನಿನ್ನೆ ರಾತ್ರಿ ಸುಖವಾಗಿ ನಿದ್ರೆ ಬಂದಿತ್ತೇ?'' ಎಂದು ಕೇಳಿದಳು. " ಅಷ್ಟೇನೂ ಸುಖವಾಗಿ ನಿದ್ರೆಯಾಗಲಿಲ್ಲಾ?" ಎಂದು ಅಂದುಕೊಳ್ಳುತ್ತ ಮಲಗುವ ಕೋಣೆಯ ಎದುರಿನಲ್ಲಿ ಹೋಗಿ ನಿಂತಳು. ಚಂಪಾ ಈಗಲೂ ಕನಸು

ಕಾಣುವರಂತೆ, ಕೇಕೆಹಾಕುತ್ತ ಕೈಕಾಲುಗಳನ್ನು ಕುಣಿಸುತ್ತ ಹಂಚುಗಳನ್ನು ನೋಡುತ್ತ ಆಟವಾಡುತ್ತಿದ್ದಳು. ಕಮಲಾ ಮೋಹನನನ್ನು ಎಚ್ಚರಿಸುವದಕ್ಕೆಂದು "ತಮ್ಮಾ, ತಮ್ಮಾ" ಎಂದು ಕೂಗುವಳು. ಮೋಹನನಿಗೆ ನಿತ್ಯ ಬೆಳಗಿನಲ್ಲಿ ಇಂಗ್ಲೀಷ ಶಬ್ದಗಳನ್ನು ಕಂಠಪಾಠಮಾಡುವದಿರುತ್ತಿತ್ತು. ಅದಕ್ಕಾಗಿ ನಿತ್ಯ ಇರುಳಿನಲ್ಲಿ ಮಲಗುವಾಗ ತಾಯಿಗೆ ಬೆಳಗಿನಲ್ಲಿ ತನ್ನನ್ನೆಬ್ಬಿಸಲು ಹೇಳಿರುತ್ತಿದ್ದ. ಆಕೆ ಅದರಂತೆ ಎಬ್ಬಿಸಿದರೂ ಅವನು ಏಳುವದು ಎಲ್ಲಿಗೂ ಎದ್ದ ಮೇಲೆಯೆ. ಕೂಗಿದರೂ ಏಳದ್ದರಿಂದ ಎರಡು ಮೂರು ಸಲ ಆತನನ್ನು ಹೊರಳಾಡಿಸಿದಳು. ಎಷ್ಟೋ ಸಮಯದ ನಂತರ ಕಣ್ಣುಜ್ಜುತ್ತ ಎದ್ದು ಕುಳಿತರೂ ಮರುಕ್ಷಣದಲ್ಲಿ ಹಾಸಿಗೆಯಲ್ಲಿ ಒರಗಿ ತುಂಬಾ ಛಾದರನ್ನು ಹೊದೆದುಕೊಂಡನು. ಮಗುವಿನ ನಿದ್ರೆಗೆ ಅಡ್ಡಿಮಾಡುವದು ಆಕೆಗೆ ಇಷ್ಟವಿಲ್ಲ. ಅಂತೆಯೇ "ಮಲಗಲಿ! ಅವನೇನೂ ಈಗ ಎಂ. ಎ. ಪರೀಕ್ಷೆಗೆ ಕಟ್ಟಬೇಕಿಲ್ಲ" ಎಂದು ಸುಮ್ಮನಾದಳು.

ಕಮಲಾ ಪತಿಗೂ ಮಕ್ಕಳಿಗೂ ಹಲ್ಲುಜ್ಜಲು ಸಾಮಗ್ರಿಯನ್ನು ಸಿದ್ಧಪಡಿಸಿ, ದೇವರ ಮನೆಗೆ ಹೋಗಿ ಕಸಗೂಡಿಸಿ, ದೀಪಹಚ್ಚಿ, ಬಚ್ಚಲುಮನೆಗೆ ಹೋಗಿ ನೀರು ಕಾಯಿಸುವ ಯಂತ್ರಕ್ಕೆ (Boiler) ಬೆಂಕಿ ಹಾಕಿ ನೀರು ಕಾಯ್ಸಿ ಜಳಕಮಾಡಿದಳು. ತಿರುಗಿ ಅಡಿಗೆಮನೆಯಲ್ಲಿ ಹೆಜ್ಜೆಯಿಟ್ಟಳು. ಆಗ ನೇಸರು ಉದಯಿಸಿದನು. ಮೂಡಣದ ಕಿಡಕಿಯಿಂದ ಬೀದಿಯಲ್ಲಿ ಟಾಂಗಾ, ಮೋಟಾರು, ಸಾಯಕಲ್, ಇತ್ಯಾದಿ ವಾಹನಗಳು ಸಾಗುವದು ಕಾಣಿಸುತ್ತಿತ್ತು. ಅವಸರದಿಂದ ಒಲೆಬೆಂಕಿಮಾಡಿ ಚಹಕಟ್ಟಿ, ಗವಳಿಗನಿಂದ ಹಾಲನ್ನು ಅಳೆಯಿಸಿಕೊಂಡಳು. ಮೋಘು ತನ್ನ ಕೆಲಸವನ್ನೆಲ್ಲ ತೀರಿಸಿ "ಅಮ್ಮಾ ಬಾಬುಗಳಿಗೆ ಚಹ ಬೇಕಂತೆ" ಎಂದು ಕೂಗುವನು. 'ಎನು ಟ್ರೈಜೇನೆ, ಸ್ವಲ್ಪ ತಾಳೆಂದು ಹೇಳು ಅವರಿಗೆ, ನಿತ್ಯ ಹಾಸಿಗೆಯಲ್ಲಿಯೇ ಚಹತರಿಸಿ ಹುಡುಗರಿಗೆ ಕಲಿಸಿದ್ದಾರೆ. ನಾಳೆ ಅವರು ತಲೆಗೇರಿದರೆ ತಿಳಿಯುವದು. ಅದಿರಲಿ, ನಿನ್ನ ಕೆಲಸ ಮುಗಿಸಿದೆಯಾ?"

"ಹೂಂ; ಮುಗಿಯಿತು ....ಅಮ್ಮಾ, ಅವರು ಜಗಳವಾಡುತ್ತಾರೆ."

"ಏನು?..... ಜಗಳ!"

"ದಿಂಬಿನಿಂದ ಬಡಿದಾಡುತ್ತಿದ್ದಾರೆ........"

“ಮತ್ತೂ ಸುರುವಾಯಿತೆ? ಮಾಡ್ತೇನಿ ತಡೆ, ಅವರಿಗೆ ಹದ……”
ಹಾಸಿಗೆಗಳನ್ನು ಕಲ್ಲಾಬಿಲ್ಲಿಯನ್ನಾಗಿ ಮಾಡಿ ದಿಂಬುಗಳನ್ನು ಅತ್ತಿತ್ತ ಒಗೆಯು ಹೊಲಸುಮಾಡುವದು ಆಕೆಗೆ ಸೇರುತ್ತಿರಲಿಲ್ಲ. ಸಿಟ್ಟಿನಿಂದ ಮಹಡಿ ಏರಿ ಹೋದಳು. ಕೋಣೆಯಲ್ಲಿ ಯುದ್ಧವು ಮುಂಗಾಲೊಟದಲ್ಲಿಯೇ ಇರುವದು. ಮೋನ್ಯಾ ಮತ್ತು ಲಕ್ಕಿ ಒಂದು ಕಡೆಗೆ, ಶೋಭಾ ಮತ್ತು ಗುಣು ಇನ್ನೊಂದು ಕಡೆಗೆ, ತಂದೆಯೂ ಹಲವು ಸಲ ಪರಿಶರ ಪಕ್ಷವಹಿಸುತ್ತಿದ್ದನು. ಪಾಪ! ಬಡಕಾಯಿ ಲಕ್ಕಿಯು ದಿಂಬುಗಳನ್ನು ಅತ್ತಿತ್ತ ಒಗೆದಾಡಿ ಎಲ್ಲರೂ ಜಗ್ಗಾಡುತ್ತಿದ್ದರು. ಆಗಾಗ ಅವನು “ನನ್ನ ದಿಂಬು, ನನ್ನ ದಿಂಬು!” ಎಂದು ಕಿರುಚುತ್ತಿದ್ದರೂ ತನ್ನ ಪಕ್ಷಗೆದ್ದರೆ ನಗುತ್ತಿದ್ದ. ರಣರಂಗದಲ್ಲಿ ಚಂಪು ಸುಖವಾಗಿ ಮಲಗಿ ನಿದ್ರಿಸುತ್ತಿದ್ದಳು.

ತಾಯಿ ಬಂದಕೂಡಲೇ ಯುದ್ಧ ನಿಂತಿತಾದರೂ ಮೋನ್ಯಾ ಶೋಭಾಳ ಕೈಯಲ್ಲಿರುವ ದಿಂಬನ್ನು ಕಸಿದುಕೊಳ್ಳಲು ಆಕೆಯ ಮೇಲೆ ಜಿಗಿದನು.

“ಏನು ಕೆಟ್ಟ ಹುಡುಗರಪ್ಪಾ ನೀವು! ಮುಂಜಾನೆ ಏಳುವದೇ ತಡ, ಆಗಲೇ ಪ್ರಾರಂಭವಾಯಿತು. ನೋಡ್ರಲ್ಲಿ ಏನು ಮಾಡೀರೆಂಬುದನು, “ಹಿಂಗೆಲ್ಲಾ ಮಾಡಿದರೆ ಎಲ್ಲರನ್ನೂ ಹೊಡಿ…… ”

“ಮೋನ್ಯಾನೇ ಮೊದಲು ಪ್ರಾರಂಭ ಮಾಡಿದ್ದು” ಎಲ್ಲರೂ ಒಮ್ಮೆಲೇ ಕೂಗಿದರು.

“ನಾನೇನು! ಮೊದಲು ಸುರುವು ಮಾಡಿದ್ದು? ಅವ್ವ………”

“ಅವ್ವಾ ನನ್ನ ದಿಂಬ ನೋಡೆ, ಹೇಗೆ ಒಳಗಿನ ಹತ್ತಿ (ಅರಳಿ) ಹೊರಗೆ ಬಂದಿದೆ!”

‘ಏ, ಮೋನ್ಯಾ ಏಳು, ದಡ್ಡ ತಿಂದಿನ್ನ ತಂದು, ಒಳ್ಳೆಯವ, ಒಳ್ಳೆಯವನೆಂದು ಇಷ್ಟು ದಿವಸ ಕೈಕಾಲ್ಹಿಡಿದ್ರೆ……ಸಲಿಗೆಯ ನಾಯಿ ತಲೆಗೇರಿತಂತೆ; ನಡಿಯಾ… ….’’

ಆಕೆಯ ಸ್ವಾಮಿ ಆಕೆ ಬಂದುದನ್ನು ತಿಳಿದು ಕಣ್ಣುಮುಚ್ಚಿ ತುಂಬ ಹೊದೆದುಕೊಂಡು ಮಲಗಿದವನಂತೆ ನಟಿಸಿದನು. ಮೋನ್ಯಾ ಸದ್ದು ಮಾಡದಂತೆ ಎದ್ದು ಹೊರಟನು. ಅವನಿಗೆ ಗೊತ್ತು, ಹೇಗೂ ಆಕೆ ಸ್ನಾನಮಾಡಿ ಮಡಿಯಿಂದ ಇರ್ತಾಳೆ, ತನ್ನನ್ನು ಮುಟ್ಟುವದಿಲ್ಲವೆಂದು. ಕಮಲಾ ಕೆಳಗಿಳಿದು

ಬಂದು ಮೋಧುವಿನೊಂದಿಗೆ ಪತಿಗೆ ಚಹ, ಮಕ್ಕಳಿಗೆ ಹಾಲು, ಗಂಜಿಗಳನ್ನು ಮೇಲಕ್ಕೆ ಕಳಿಸಿಕೊಟ್ಟಳು. ತಾನು ಸರಕಿನ ಕೋಣೆಗೆ ಕಾಯಿಪಲ್ಲೆ ತರಲಿಕ್ಕೆ ಹೋದಳು. ಅಡಿಗೆಗೆ ಸಮಯವದು. ಮೋಧು ಬಾಗಿಲಲ್ಲಿ ನಿಂತು "ಅಮ್ಮಾ, ಪೇಟೆಯಿಂದ ಏನು ತರಲಿ?" ಎಂದು ಕೇಳಿದನು. ಪಾತ್ರೆ ತಿಕ್ಕುವಾಕೆ ಕಬ್ಬಿಣದ ಪಾತ್ರೆಗಳನ್ನು ಇಟ್ಟಂಗಿ ತುಂಡಿನಿಂದ ತಿಕ್ಕುವ ಕಿರಿಕಿರಿ ಹಿರಿ ಸಪ್ಪಳವು ಕೇಳಬರುತ್ತಿತ್ತು. ಲಕ್ಕಿ ಬಂದನು. ಆತನೊಂದಿಗೆ ಶೋಭಾಳೂ ಬಂದಳು.

"ಅಮ್ಮಾ, ಲಕ್ಕಿ ಹಾಲು ಕುಡಿಯಲೊಲ್ಲ..." ಶೋಭಾಳ ದೂರು.

ಕಮಲಾಗಳ ಎದುರಿನಲ್ಲಿ ಈಳಿಗೆ ಇತ್ತು. ಸುತ್ತಲೂ ಕಾಯಿಪಲ್ಲೆಗಳ ಚಿಕ್ಕ ಚಿಕ್ಕ ಗುಡ್ಡಗಳೇ ನಿಂತಿದ್ದವು. ಆಕೆ ಗಜ್ಜರಿ ಮತ್ತು ಆಲುಗಡ್ಡೆಗಳನ್ನು ಹೆಚ್ಚುತ್ತಿದ್ದಳು. ಮೊದಲು ಸಿಟ್ಟುಮಾಡಿ ನಂತರ ಲಂಬಿಸಿ, ಮಕ್ಕಳನ್ನು ಸಮಾಧಾನ ಪಡಿಸುತ್ತ ನಡುನಡುವೆ ಅಡಿಗೆಯ ಬ್ರಾಹ್ಮಣನಿಗೂ ಸಲಹೆ ಕೊಡುತ್ತಿದ್ದಳು.

"ಲಕ್ಕಿ, ನಮ್ಮಪ್ಪ ಒಳ್ಳೇ ಹುಡುಗ; ಹಟಮಾಡಬಾರದು. ಈಗ ಹಾಲು ಕುಡಿ. ಪುನಃ ನನ್ನೊಂದಿಗೆ ಚಹ ಕುಡಿಯುವಿಯಂತೆ, ರಾಣು, ನಮ್ಮವ್ವಲ್ಲೇ ನೀನು. ಚಂಪು ಎದ್ದ ಹಾಗೆ ಕಾಣಿಸುತ್ತದೆ; ಹೋಗಿ ಆಕಿನ್ನ ಕರೆದುಕೊಂಡು ಬಂದು ಹಾಲು ಕುಡಿಸುವಿಯಾ?"

ಶೋಭಾ ಜಾಣ ಹುಡುಗಿ, ಮನೆಕೆಲಸಗಳೆಂದರೆ ಆಕೆಗೆ ಹಿಡಿಯುವವರಿಲ್ಲ, ರಾಣು ಅಂಕಲೀಪಿ ಮುಗಿಸಿದ್ದಾಳೆ, ಹೆಚ್ಚಿಗೆ ಓದಲು ಆಸಕ್ತಿಯಿಲ್ಲ. ಕಲಿತು ಮಹಾಪಂಡಿತೆಯಾಗುವದಕ್ಕಿಂತ ಕಲಿಯದೆ ಮೂರ್ಖಳಾದರೂ ಚಿಂತೆಯಿಲ್ಲ. ಒಲೆಯ ಮುಂದೆ ಕುಳಿತು ಅಡಿಗೆಮಾಡುವದೇ ಆಕೆಗೆ ತುಂಬಾ ಇಷ್ಟ. ಯಾವಾಗಲೂ ಅಡಿಗೆ ಮನೆಯಲ್ಲಿ ಏನಾದರೊಂದು ಕೆಲಸ ಮಾಡುವ ನೆವದಿಂದ ಮನೆಗೆ ಬಂದು ಕಲಿಸುವ ಮಾಸ್ತರರಿಗೆ ಗಸ್ತಿಕೊಡುತ್ತಿದ್ದಳು. ಓದುತ್ತ ಕುಳಿತಾಗ ಚಂಪು ಸ್ವಲ್ಪ ಅತ್ತರೆ ಸಾಕು. ಒಮ್ಮೆಲೇ ಅಭ್ಯಾಸವನ್ನುಳಿದು ಬಳಿಗೆ ಜಿಗಿದು ತಾಯಿಗೆ ನೆರವಾಗುತ್ತಿದ್ದಳು.

ಅಕ್ಕಿ ಹಿಟ್ಟು ಅಡಿಗೆಯವನಿಗೆ ಕೊಟ್ಟು, ಮತ್ತೇನೊ ಆಣತಿ ವಿಧಿಸಿ, ಕಮಲಾ ಪುನಃ ಮಹಡಿಯನ್ನೇರಿದಳು. ಮನೆಯಲ್ಲಿ ಈಗಾಗಲೇ ತುಂಬಾ

ಗದ್ದಲ ಪ್ರಾರಂಭವಾಗಿತ್ತು. ರಾಣು, ಮೋನ್ಯಾನೊಂದಿಗೆ ಸ್ಪರ್ಧಿಸುವಳಂತೆ, ಧ್ವನಿ ತೆಗೆದು ಗಟ್ಟಿಯಾಗಿ ಅಂಕಲಿಪಿ ಓದುತ್ತಾಳೆ. ನಳದ ಬಳಿಯಲ್ಲಿ ಮುಸುರೆ ತಿಕ್ಕುವ ಖೆಟ್ರ್ಯೋನ ತಾಯಿ ಸದ್ದುಮಾಡುತ್ತ ಪಾತ್ರೆತೊಳೆಯುತ್ತಾಳೆ. ಮಲಗುವ ಮನೆಯಲ್ಲಿ ಕೇಸ್ತ್ರೋ ಝಾಡಿಸಿ, ಝಾಡಿಸಿ ಹಾಸಿಗೆ ತೆಗೆಯುವನು. ನೆಲದಮೇಲೆ ಕುಳಿತು ಲಕ್ಕಿ ಮತ್ತು ಚಂಪು ತಂದೆಯೊಂದಿಗೆ ಕೇಕೆ ಹಾಕುತ್ತಿದ್ದರು ಕೈಸಾಲೆಯಲ್ಲಿ ಇಳಿಬಿಟ್ಟ ಪಂಜರದೊಳಗಿನ ಗಿಳಿಯು ಮಾತಾಡಲಿಕ್ಕೆ ಮೊದಲು ಮಾಡಿತ್ತು ಕಮಲಾ ಮಲಗುವ ಮನೆಗೆ ಹೋಗಿ ಪುನಃ ತಿರುಗುವದರಲ್ಲಿದ್ದಳು ಚಂಪು ಅತ್ತಳು ಆಕೆಯನ್ನು ಸಮಾಧಾನ ಪಡಿಸಿ ದೇವರ ಮನೆಗೆ ಹೋಗಿ ಸೀರೆ ಬದಲುಮಾಡಿ ಮಡಿ ಉಡುವಳು. ಮುಂಜಾನೆಯಿಂದ ಪ್ರಾರ್ಥನೆಗೆ ಆಕೆಗೆ ಸಮಯವೇ ಸಿಕ್ಕಿರಲಿಲ್ಲ. ಮನೆಯ ಎಲ್ಲ ಜಂಜಡಗಳನ್ನು ಮರೆತು ಒಂದು ಕ್ಷಣ ದೇವಧ್ಯಾನದಲ್ಲಿ ಬೆರೆತಳು. ಆದರೂ ಆಕೆಯ ಮನಸ್ಸು ಸಂಪೂರ್ಣ ಪ್ರಾರ್ಥನೆಯಲ್ಲಿಯೇ ಸಿಲುಕಿರಲಿಲ್ಲ ಮೋಧುವಿನ ಸ್ವರ ಕೇಳಿಸಿತ. 'ಎಂಥ ಮೀನು ತಂದನೋ ತಿರುಗಿ ಎಷ್ಟು ಚಿಲ್ಲರೆ ತಂದಿರಬಹುದು?' ಎಂದು ಚಿಂತಿಸುವದರ ಜೊತೆಗೆ ಪ್ರಾರ್ಥನೆ ಮುಗಿಸಿ ಕೆಳಗೆ ಬಂದಳು.

ಮೀನನ್ನು ಎಷ್ಟು ಭಾಗಗಳನ್ನಾಗಿ ಕತ್ತರಿಸಬೇಕೆಂದು ಅವನಿಗೆ ಸಲಹೆ ಕೊಟ್ಟು, ಅಡಿಗೆಮನೆಯಲ್ಲಿ ಹಾಗೆಯೇ ಒಂದು ಸಲ ಕಣ್ಣೋರಳಿಸಿ ಕಮಲಗಳು ಪುನಃ ಸರಕಿನ ಕೋಣೆಗೆ ಹೋದಳು ಅತ್ತೆಯು ಯಾವಾಗಲೋ ಅಟ್ಟದಿಂದ ಕೆಳಗಿಳಿದು ಬಂದು ಒಂದು ಮೂಲೆಯಲ್ಲಿ ಕುಳಿತದ್ದು ಆಕೆಯ ಗಮನಕ್ಕೆ ಬಂತು. ಆಕೆ ಈಗಲೇ ಸ್ನಾನಮಾಡಿ ನಿತ್ಯದಂತೆ ಪೂಜೆಮಾಡಿದ್ದಳು "ಕಮಲಾ, ಅಷ್ಟು ಎಲೇಅಡಿಕೆಯನ್ನು ಕೊಡೇ" ಅತ್ತೆ ಕೇಳಿದಳು. ಕಮಲು ಕೊಟ್ಟಳು "ಅವ್ವಾ ನಿನ್ನ ಮಗಳು ಬ್ಯಾಳ ತಂಟಿಖೋರಿ; ಆಕೆಯನ್ನು ಹಿಡಿಯುವದೇ ಕಷ್ಟ!" ಎಂದು ಹೇಳುತ್ತ ಚಂಪಾಳನ್ನು ಎತ್ತಿ ತೊಡೆಯ ಮೇಲೆ ಮಲಗಿಸಿ ಆನೆಯಾಡಿಸುವಳು ಚಂಪು ಆಗಲೂ ಸಹಿತ ಒಂದು ಬಟಾಟೆಯ ಹೋಳನ್ನು ಹಿಡಿದು ಸೆಕ್ಕುವದನ್ನು ಬಿಡುವದಿಲ್ಲ.

ಗಡಿಯಾರದಲ್ಲಿ ಆಗಲೇ "ಡನ್ನ ಡನ್ನ" ಎಂದು ಒಂಭತ್ತು ಬಾರಿಸುವದು; ಅಡಿಗೆಯವನು ನಲ್ಲಿಯಿಂದ ಆಗಲೇ ನೀರು ತುಂಬಿದ್ದನು. ಹುಡುಗರೆಲ್ಲರೂ ನಲ್ಲಿಯ ಸುತ್ತಲೂ ಸ್ನಾನಮಾಡುವದಕ್ಕೆ ನೆರೆದರು. ಲಕ್ಕಿ ಬತ್ತಲೆ

ಯಾಗಿ ಓಡಿಬಂದು ಅಳುಧ್ವನಿಯಲ್ಲಿ "ಅವ್ವಾ, ಯಾರೂ ನನ್ನ ಮೈತೊಳೆಯ ಲಿಲ್ಲ''ವೆಂದು ತಕರಾರು ಹೇಳಿದನು.

"ಅವ್ವಾ ನನ್ನ ಖಾದೀ ಶರ್ಟು ಎಲ್ಲಿದೆ?" ಮೋನ್ಯಾನ ಬೇಡಿಕೆ.

"ನಾನ ವ ಸೀರೆ ಉಟ್ಟುಕೊಳ್ಳಲವ್ವಾ?" ಶೋಭಾ ಸಲಹೆ ಕೇಳಿದಳು.

"ಅವ್ವಾ ಈ ದಿವಸ ನಮ್ಮ ಶಾಲೆಗೆ ಸಾಹೇಬರು ಬರುತ್ತಾರಂತೆ; ಜರದ ಪೋಲಕಾ ತೊಟ್ಟುಕೊಳ್ಳುತ್ತೇನೆ" ರಾಣು ಕೂಗಿದಳು.

"ನಮ್ಮ ಅಕ್ಕವ್ವ ನಮಗೆ ರೇಶ್ಮಿ ಸೀರೆ ಉಡಬೇಡಿರೆಂದು ಹೇಳತಾರೆ, ಸಂಜೆಯಮುಂದೆ ತಿರುಗಾಡಲಿಕ್ಕೆ ಹೋಗುವಾಗ ತಾವೇ ಉಟ್ಟುಕೊಂಡು ಹೋಗತಾರ" ಶೋಭಾ ತನ್ನಷ್ಟಕ್ಕೆ ತಾನೇ ಒಡಗಟ್ಟಿದಳು.

ರಾಣುಗೆ ಅಂದು ಸೀರೆ ಉಟ್ಟುಕೊಂಡು ಹೋಗಬೇಕೆನ್ನಿಸಿತ್ತು. ಆದರೆ ಇಷ್ಟು ದಿನ ಪೋಲಕಾ, ಪರಕಾರ ತೊಟ್ಟಿದ್ದಳ ಇಂದೆ ಹೊಸತಾಗಿ ಸೀರೆ ಯುಡಿಸೆಂದು ತಾಯಿಯನ್ನು ಕೇಳಲಿಕ್ಕೆ ನಾಚಿಕೆಯಾಯಿತು.

ಎಲ್ಲರೂ ಸ್ನಾನಮುಗಿಸಿದರೂ ಲಕ್ಕಿ ಇನ್ನೂ ಸ್ನಾನಮಾಡಿರಲೇ ಇಲ್ಲ ಶೋಭಾಳ ಕೃಪೆಯಿಂದ ಆತ ಕೊನೆಗೆ ಸ್ನಾನಮಾಡಿದ, ಲಕ್ಕಿ ತುಂಬಾ ತುಂಟ; ಮೈ ಒಣಗಿದರೆ ಸಾಕು, ಮತ್ತೆ ನಳದ ಕೆಳಗೆ ಹೋಗಿ ಕೂಡುತ್ತಿದ್ದನು. ಅಂತೂ ಇಡಿಯ ದಿನವೆಲ್ಲ ಅವನು ಸ್ನಾನಮಾಡುತ್ತಲೇ ಇರುತ್ತಿದ್ದನು. ಆದ್ದರಿಂದ ಆತನಿಗೆ ಸ್ನಾನಮಾಡಿಸಲು ಯಾರೂ ಮುಂದೆ ಬರುತ್ತಿರಲಿಲ್ಲ. ಕೊನೆಗೆ ಕಮಲುನೇ ಸ್ನಾನಮಾಡಿಸಬೇಕಾಗುತ್ತಿತ್ತು. ಇಂದು ಶೋಭಾ ಮೊದಲು ಜಳಕ ಮಾಡಿಸಿದ್ದರೂ ಮತ್ತೆ ಮೈ ಹೊಲಸುಮಾಡಿಕೊಂಡು ಪುನಃ ಸ್ನಾನಮಾಡಿಸೆಂದು ಹಟಹಿಡಿದನ ಈ ಸಲ ಯಾರೂ ಕನಿಕರಕ್ಕೆ ಬರಲಿಲ್ಲ. ಲಕ್ಕಿ ಅಸಹಾಯನಾದಂತ, ತನ್ನ ಒಂದೇ ಒಂದು ಅಸ್ತ್ರವನ್ನು ಕೊನೆಗೆ ಉಪಯೋಗಿಸಿದ; ಧ್ವನಿತೆಗೆದು ಅಳಹತ್ತಿದನು ಕಮಲಾ ಒಂದು ಮೈಗೆ ಎಣ್ಣೆ ಹಚ್ಚಿ, ಸೀಗೆ ಕಾಯಿಯಿಂದ ತಿಕ್ಕಿತಿಕ್ಕಿ ತೊಳೆಯಲುಪಕ್ರಮಿಸಿದಳು, ಮಧ್ಯದಲ್ಲಿಯೇ ಆ ಕೆಲಸವನ್ನು ಮೋಧುವಿಗ ಒಪ್ಪಿಸಿ, ತಾನು ಚಂಪುವಿನ ಸ್ನಾನವನ್ನು ಬಿಸಿನೀರಿನಿಂದ ಮಾಡಿಸಿದಳು.

ಕೈಸಾಲೆಯಲ್ಲಿ ಪಂಕ್ತಿಯಚಾಪೆ, ಸಣ್ಣ ಸಣ್ಣ ಮಣೆ ಹಾಕಿ ಸಿದ್ಧವಾಗಿದ್ದವು. ಮಕ್ಕಳು ಊಟಕ್ಕೆ ಕೂಡುವ ಸಮಯವದು. ತಾಟು ಹಾಕಿದರು. ಅಡಿಗೆಯುವನಿಂದ ಕಮಲಾ ಅನ್ನ ತರಿಸಿದಳು. ಎಲ್ಲರಿಗೂ ಬಡಿಸಿದಳು. ಹುಡುಗರು ಗಡಿಬಿಡಿಯಿಂದ ನುಂಗಲಿಕ್ಕೆ ಹತ್ತಿದರು.

"ಮೋಹನ ಸಾವಕಾಶ ಉಣ್ಣು. ಈಗಿನ್ನೂ ಒಂಭತ್ತೂವರೆಯಾಗಿದೆ"

"ಅವ್ವಾ ಇವತ್ತು ನಮ್ಮ ಪರೀಕ್ಷೆಯದೆ" ಯಾವಾಗಲೂ ಒಂದು ನೆವವಿರುತ್ತಿತ್ತು ಆತನದು. ಪರೀಕ್ಷೆಯದಿನ ಒಂದರ್ಧಗಂಟೆ ಮೊದಲು ಹೋಗುವೆನೆಂದರೆ ಯಾರೂ ಬೇಡವೆನ್ನುವದಿಲ್ಲ. ಹುಡುಗರು ಊಟಮಾಡಿ ಮುಗಿಸಿದರು. ಆದರೆ ಇಂದು ಕಮಲಾ ಅವರೆದುರಿನಲ್ಲಿ ಕೂಡಲಿಲ್ಲ ಇದ್ದಲಿ ಒಲೆಯ ಮುಂದೆ ಕುಳಿತು ಏನನ್ನೋ ತಯಾರಿಸುತ್ತಿದ್ದಳು. ಅಡಿಗೆಯವನಿನ್ನೂ ಆಲುಪಲ್ಲೆ ಮಾಡಿರಲಿಲ್ಲ. ಅತ್ತೆ ಮೂಲೆಯಲ್ಲಿ ಕುಳಿತು ತೂಕಡಿಸುತ್ತಿದ್ದಳು. ಸಮಯವಿರಲಿಲ್ಲ, ಆಕೆಯ ಕಡೆಗೆ ಲಕ್ಷಗೊಡಲು ಕಮಲಾಗೆ. ಮಕ್ಕಳಿಗೆ ತಿನ್ನಲಿಕ್ಕೆಂದು ಪ್ರತಿಯೊಬ್ಬರಿಗೂ ಒಂದೊಂದು ಡಬ್ಬಿಯಲ್ಲಿ ತಿಂಡೀ ತುಂಬಿ ಸಿದ್ಧಪಡಿಸಿದಳು.

ಮೋಟಾರು ಬಂತು. ಅವಸರದಿಂದ ಶೋಭಾ ರಾಣಿ ಚಪ್ಪಲಹಾಕಿಕೊಂಡು ಹೋಗಿ ಮೋಟಾರಿನಲ್ಲಿ ಕುಳಿತರು. ಕಮಲಾ ತಿನಸಿನ ಡಬ್ಬಿಗಳೆರಡನ್ನೂ ಅವರಿಗೆ ಕೊಟ್ಟಳು; ಅವರಿಬ್ಬರೂ ಶಾಲೆಗೆ ಹೋದರು.

"ಅವ್ವಾ ನನಗೂ ಹೊತ್ತಾಯಿತು." ಎಂದು ಮೋಹನ್ಯಾ ತನ್ನ ಚರ್ಮದ ಚೀಲದ ತುಂಬ ಪುಸ್ತಕ ತುಂಬಿಕೊಂಡು ಕಮಲಾ ಮೇಲೆ ಹೋಗಿದ್ದುದರಿಂದ ಮಹಡಿಯೇರಿ ಬಂದನು.

"ಈ ದಿನ ನಿಮ್ಮ ಪರೀಕ್ಷೆ ಯೇನಪ್ಪಾ?"

"ಹೌದವ್ವಾ, ಪರೀಕ್ಷೆ ಸಾಹೇಬರು ಬರುತ್ತಾರೆ" ತ್ವರೆಯಿಂದ ಹೇಳಿ, ಬಾಗಿ ಆಕೆಗೆ ನಮಸ್ಕರಿಸಿದ. ಪರೀಕ್ಷೆಯದಿನ ತಾಯಿಗೆ ನಮಸ್ಕರಿಸಿದರೆ ವ್ಯರ್ಥಹೋಗುವದಿಲ್ಲವೆಂದು ಅವನಿಗೆ ಗೊತ್ತು. ಖಂಡಿತವಾಗಿ ಪರೀಕ್ಷೆಯಲ್ಲಿ ಜಯಸಿಗುವದೆಂದು ಅವನ ಮನಸ್ಸಿನಲ್ಲಿ ನಟ್ಟುಹೋಗಿತ್ತು. ಕಮಲಾ ಅವನ ಶರ್ಟಕಾಲರನ್ನು ಸರಿಮಾಡಿ, ಶರ್ಟಿನ ಮೇಲಿನ ಬಿರಡಿ ಹಾಕಲಕ್ಕೆ ಹೋದಳು.

"ಬೇಡವ್ವಾ, ಮೇಲಿನ ಬಿರಡಿ ಹಾಕದೆ ಬಿಡುವದು ಈಗ ಫ್ಯಾಶನ್ನು ಆಗಿದೆ. ಮೇಲಾಗಿ ಬಿಸಿಲು; ತುಂಬಾ ಶಕೆ" ಮಿಂಚಿನಂತೆ ಮೋನು ಮಾಯ ವಾಗಿ ಬಿಟ್ಟನು.

ಆಕೆಯ ಪತಿಗೆ ಊಟದ ಸಮಯವಾಯಿತು. ಆತನು ಕೆಳಗೆ ಊಟಕ್ಕೆ ಕುಳಿತನು. ಕಮಲಾ ಒಂದು ಕೈಯಲ್ಲಿ ಚಹದ ಕಿಟ್ಲಿಯನ್ನೂ, ಇನ್ನೊಂದು ಕೈಯಲ್ಲಿ ಬೀಸಣಿಕೆಯನ್ನೂ ಹಿಡಿದುಕೊಂಡು ಅಲ್ಲಿಗೆ ಬಂದಳು. ಲಕ್ಕಿಗೆ ಏನು ಮಾಡಬೇಕೆಂಬುದು ತಿಳಿಯಲೊಲ್ಲದು. ತಾಯಿಯೊಂದಿಗೆ ಚಹವನ್ನು ಕುಡಿಯುವದೋ, ಇಲ್ಲವೆ ತಂದೆಯೊಂದಿಗೆ ಬೇಯಿಸಿದ ಮಿಠಾನ ತಿನ್ನುವದೊ. ಕೊನೆಗೆ ಚಹವನ್ನು ಕುಡಿಯಲಿಕ್ಕೆ ಒಲ್ಲೆನೆಂದು ಹೇಳಿ ಮಿಠಾನ ತಿನ್ನಲಿಕ್ಕೆ ಹತ್ತಿದನು. ಆದರೂ ತಾಯಿಯು ಹಿಡಿದಿರುವ ಕಪ್ಪು ಬಸಿಗಳನ್ನು ದಿಟ್ಟಿಸುವದನ್ನು ಬಿಡಲಿಲ್ಲ. ಚಂಪೂ ಮಾತ್ರ ಒಳ್ಳೆಯ ಹುಡಿಗೆ; ಹಟಮಾಡ ಲಿಲ್ಲ. ಹಿಂದೆ ಹಿಡಿದ ಬಟಾಟೆ ಚೂರು ಇನ್ನೂ ಕೈಯಲ್ಲಿಯೇ ಇತ್ತು. ನೆಕ್ಕುತ್ತ ಕುಳಿತುಬಿಟ್ಟಳು.

ಕಮಲಾ ಎಲೆಯಡಕೆ ತಟ್ಟಿಹಿಡಿದು ಮೇಲೆ ಬರುವಷ್ಟರಲ್ಲಿ ಆಕೆಯಪತಿ ಆಗಲೇ ಕೋಟನ್ನುಳಿದು ಎಲ್ಲ ಅರಿವೆಧರಿಸಿದ್ದನು. ಮೋಧು ಗಾಳಿಹಾಕುತ್ತ ನಿಂತಿದ್ದ. ಕಮಲಾ ಬಂದಕೂಡಲೇ ಆತನು ಗಾಳಿಹಾಕುವದನ್ನು ಬಿಟ್ಟು ಕೆಳ ಗಿಳಿದು ಹಾರಿದನು ಕಮಲಾ ಗಾಳಿ ಹಾಕುತ್ತ ಮನೆತನದ ವಿಷಯವಾಗಿ ನಕ್ಕು ಕಲೆಯುತ್ತ ನಾಲ್ಕು ಮಾತುಗಳನಾಡಿದಳು ಸತಿ-ಪತಿಯರಿಬ್ಬರೂ ಸ್ವಚ್ಛಂಧವಾಗಿ ಮಾತನಾಡಲಿಕ್ಕೆ ಹುಂಜಾನೆಯಿಂದ ಇದೊಂದೆ ತಕ್ಕ ಸಮ ಯವು ಮಾತನಾಡುತ್ತಲೇ ಆತನು ಪೂರ್ಣ ಒಟ್ಟೆ ಧರಿಸಿದ. ಕಮಲಾ ಕೋಟು ಹಿಡಿದಳು. ಆತನು ಅದರಲ್ಲಿ ತೋಳುಹಾಕುತ್ತ "ಪ್ರಿಯೆ, ಉಪ ಕಾರವಾಯಿತೆ"ಂದು ಇಂಗ್ಲೀಷಿನಲ್ಲಿ ಹೇಳಿದನು. ಒಂದು ಕೈಯಲ್ಲಿ ಹ್ಯಾಟನ್ನು ಹಿಡಿದು ಮತ್ತೊಂದು ಕೈಯಿಂದ ಆಕೆಯ ಕೋಮಲ ಕೆನ್ನೆಗಳನ್ನು ನೇವರಿಸಿದನು. ನಂತರ ಮುತ್ತನೊಂದು ಕೊಟ್ಟು ಭರಭರನೆ ಕೆಳಗಿಳಿದು ಹೋದನು. ಕಮಲಾ ನಾಚಿಕೆಯಿಂದ ಹಿಂದೆ ಸರಿದಳು. "ನಾನು ಹೋಗ್ತ ವೆ"ನೆಂದ ಆಕೆಯ ಪತಿ ಕೆಳಗಿನಿಂದ ಕೂಗಿದ್ದು ಕೇಳಬಂತು. ಸ್ವಲ್ಪ ಸಮಯದ ನಂತರ ಕಾಲೊಳಗಿನ ಬೂಟುಗಳ ಸದ್ದೂ ಕೇಳಬರಲಿಲ್ಲ ಗೇಟಿನ ಬಾಗಿಲು ಮುಚ್ಚಿದ ಸದ್ದುಕೇಳಿಸಿತು. ಕಮಲಾ ಇನ್ನು ಮುಖ

ಡಿಯ ಮೇಲೆ ನಿಂತು ಏನೆನೋ ಕನಸು ಕಾಣುತ್ತಿದ್ದಳು ಕೆಲಸಗಳೆಲ್ಲವು ಆಗ ಆಕೆಯಿಂದ ಮರೆಯಾಗಿದ್ದವು ಮನೆಯೋ ಆಕೆಗೆ ಸ್ಮಶಾನವಾಗಿದ್ದಂತೆ ತೋರಿತು ಆಕೆಗೆ ಶಕ್ತಿ ಕುಂದಿದಂತಾಗಿತ್ತು ಸ್ವಪ್ನದಿಂದ ಜಾಗ್ರತರಾದ ವರಂತೆ ತಟ್ಟನೇ ಆಕೆಗೆ ಕೆಲಸದ ಅರಿವಾಯಿತು ತನ್ನ ಸೀರೆಯ ಸೆರಗಿನಿಂದಲೇ ಗೋಡೆಗಳ ಮೇಲಿನ ಚಿತ್ರಪಟಗಳ ಮೇಲಿನ ಧೂಳು ಝಾಡಿಸಿದಳು. ಔಷಧ ಎಣ್ಣೆ ಇತ್ಯಾದಿ ಬಾಟ್ಲಿಗಳ ಮೇಲೆ ಕೂತ ಧೂಳಕ್ಕೆ ಅಪ್ಪಣೆ ಕೊಡಿಸಿದಳು ಮುಂಜಾನೆಯಿಂದ ಆಕೆ ಇದೆಷ್ಟು ಉತ್ಸಾಹದಿಂದ ಕೆಲಸ ಮಾಡಿದ್ದಾಳೆ! ಆದರೆ ಈಗ ಆಕಗೆ ಆ ಎಲ್ಲ ಉತ್ಸಾಹ ಕುಗ್ಗಿದಂತಾಗಿತ್ತು

"ಅವ್ವಾ, ಅವ್ವಾ ಅವ್ವಾ " ಯಾರೊ ಕೂಗಿದರು

" ಒಂದೆ ಮಗು, ಅಡಿಗೆಯವನನ್ನು ಕೇಳು ಮಿಾಸಿನ ಸಾರು ತಯಾರಾಗಿರುವದೋ ಹೇಗೆ"

"ತಯಾರಾಗಿದೆಯಂತವ್ವಾ"

" ಮಕ್ಕಳ ಅರಿವೆ, ಕರವಸ್ತ್ರ, ಕಾಲುಚೀಲ, ಇತ್ಯಾದಿ ಒಗೆಯಲಿಕ್ಕೆ ಮೋಧುವಿಗೆ ಹೇಳಿ ಆತನಿಗೆ ಸಾಬೂನು ಕೊಟ್ಟು ಕಮಲಾ ಅಡಿಗೆ ಮನೆಗೆ ಬಂದಳು ಲಕ್ಕಿಗೆ ಮಿಾಸಿನ ಸಾರು ಅನ್ನ ಉಣಬಡಿಸಿದಳು. ಲಕ್ಕಿ ಊಟ ಮಾಡುವದರಲ್ಲಿ ಪ್ರಾವಿಣ್ಯತೆಯನ್ನು ಪಡೆದಿದ್ದನು ಅಕ್ಕಂದಿರ ಸಂಗಡ, ಅಣ್ಣಂದಿರ ಸಂಗಡ, ಅಪ್ಪನ ಸಂಗಡ ಕಡೆಗೆ ಅವ್ವನ ಸಂಗಡ ಆತನು ಊಟಕ್ಕೆ ಕೂಡದೆ ಇರುತ್ತಿರಲಿಲ್ಲ ಇಡಿಯ ದಿವಸದಲ್ಲ ಬರಿಯ ಊಟ ಮಾಡುವದೇ ಅವನಿಗ ಹಿಡಿದ ಕೆಲಸ ತಂದೆ ಇಷ್ಟು ಸಲ ಊಟಮಾಡುವದಕ್ಕೆ ಸಿಟ್ಟುಮಾಡುತ್ತಿದ್ದನಾದರೂ, ತಾನು ಊಟಮಾಡುವಾಗ ಬಂದರೆ ಕರೆದು ತುತ್ತುಮಾಡಿ ಉಣ್ಣಿಸುತ್ತಿದ್ದನು.

ಕಮಲಾ ಲಕ್ಕಿಯೊಂದಿಗೆ ಕುಳಿತಿದ್ದಳು " ಭರ್ರ್, ಭರಪ.. ....." ಎಂದು ತೊದಲಿಸುತ್ತ ಚಂಪಾ ಅಲ್ಲಿಗೆ ಬಂದಳು. ಕಮಲಾ ಎದ್ದು ಆಕೆಯನ್ನು ಎತ್ತಿ ಮುದ್ದಾಡಿ, ಇದೇ ಈಗ ತೊಡಿಸಿದ್ದರೂ ಮೈಮೇಲಿನ ಬಟ್ಟೆ ಕೊಳೆಯಾಗಿದ್ದುದರಿಂದ ಅವುಗಳನ್ನು ತೆಗೆದು ಪುನಃ ಮತ್ತೊಂದನ್ನು ತೊಡಿಸಿದಳು.

ಮುಂಜಾನೆ ಯಾವದೇ ಕೆಲಸವಾಗಲಿ ಒತ್ತರದಿಂದಲೇ ಸಾಗುತ್ತಿತ್ತು. ಆದರ ವೇಗ ಮೇಲು ಬಂಡಿಯ ವೇಗದಷ್ಟು ಒತ್ತರ. ಈಗ ಆಲಸಿಕೆ ತಲೆ

ಹಾಕಿದೆ ಸರಕಿನ ಕೋಣೆಯಲ್ಲಿಯ, ಸಣ್ಣಪುಟ್ಟ ಕೆಲಸ, ಕ್ಯಾಸಾಲೆಯಲ್ಲಿಯ ಮೇಜು, ಖುರ್ಚಿ ಸರಿಯಾಗಿಟ್ಟು ಧೂಳ ಝಾಡಿಸುವದು ಮೊದಲಾದ ಸಣ್ಣ ಕೆಲಸಗಳೂ ಈಗ ಆಲಸಿಕೆಯಿಂದ ದೊಡ್ಡ ಕೆಲಸಗಳಿಗಿಂತ ದೊಡ್ಡವಾಗಿ ದ್ದವು ಕಮಲಾ ಮುಂಜಾವಿನಲ್ಲಾಗಿದ್ದರೆ ಈ ಕೆಲಸಗಳನ್ನೆಲ್ಲ ಆಟವಾಡುತ್ತ ಒಂದು ಕ್ಷಣದಲ್ಲಿ ಮುಗಿಸಿಬಿಡುತ್ತಿದ್ದಳು

ಕ್ರಿಸ್ತ ದೇವಾಲಯ ಘಂಟೆ ಹನ್ನೆರಡು ಬಾರಿಸಿತು ಮಧ್ಯಾಹ್ನದ ನೇಸರು ಪ್ರಜ್ವಲಿಸುತ್ತಿದ್ದ, ಉರಿ ಬಿಸಿಲೂ ಬಿದ್ದಿತ್ತು ಹೊರಗೆಲ್ಲ. ಬೀದಿಯಲ್ಲಿ ಜನರ ಮತ್ತು ವಾಹನಗಳ ಓಡಾಟದ ರಭಸ ಕುಗ್ಗಿತ್ತು. ಪಂಜರದಲ್ಲಿಯ ಗಿಣಿಯು ಹೆಸರಿಟ್ಟು ಮತ್ತು ಬ್ರೆಡ್ ತಿಂದು ತೂಗಡಿಸುತ್ತಿತ್ತು ಆಗ ಅವಳ ಅತ್ತೆಯಿಂದ ಕರೆಬಂತು.

" ತಂಗೀ, ಇನ್ನೂ ನಿನ್ನದು ಮುಗಿದಿಲ್ಲವೇನೆ? "

" ಅತ್ತೆ, ಒಂದು ನಿಮಿಷ, ಬಂದೆ, ಮಾಹಡಿಯಮೇಲೆ ಹೋಗಿ ಬಟ್ಟೆ ತರುತ್ತೇನೆ

ಕಮಲಾ ಒಂದು ಕಿಡಕಿಯ ಬಳಿಯಲ್ಲಿ ನಿಂತಳು. ನೆರೆಮನೆಯಲ್ಲಿ ಒಂದು ಹುಡಿಗೆ ಜ್ವರದಿಂದ ಹಾಸಿಗೆ ಹಿಡಿದಿದ್ದಳು ಆಕೆ ಈಗ ಹೇಗಿರುವ ದೆಂದು ಕೇಳಬೇಕಿತ್ತು ಕಮಲಳನ್ನು ಕಂಡಕೂಡಲೇ ಆ ಹುಡಿಗೆಯ ತಾಯಿ ಕೇಳಿದರು

" ಕಮಲೂ, ಇನ್ನೂ ಊಟವ ಗಿಲ್ಲೇನೇ? "

" ಕೆಲಸ ಮುಗಿಯಬೇಕಲ್ಲನೆ? ನಂತರ ಉಣ್ಣುವದು. ಕೆಲಸಕ್ಕೆ ಕೊನೆಯಿದ್ದರೆ ಸರಿ. ............... . .'

" ಕೆಲಸಮಾಡಲಿಕ್ಕೆಷ್ಟು ಉತ್ಸಾಹ ತೋರಿಸುವ ನೀನು ಹಾಗಂದರೆ ನಮ್ಮಂಥವರು..... ...... ......... .."

ಕಿಡಕಿಯ ಆಚೆಗೆ ಈಚೆಗೆ ನಿಂತು ಅವರು ತಮ್ಮ ಮನೆತನಗಳ ಸುಖ ದುಃಖಗಳ ವಿಷಯವಾಗಿ ಮಾತನಾಡಿದರು. ಹುಡಿಗಿಯ ತಾಯಿ, ಆ ಬಡ ಪಾಯಿ ಹುಡಿಗಗೆ ಜ್ವರವಿಳಿಯುವ ಲಕ್ಷಣಗಳಿಲ್ಲವೆಂದು ಹೇಳಿದಳು. ತಾಯಿಗೆ ಎಷ್ಟೋ ತೊಂದರೆಗಳು; ಕಮಲಳನ್ನು ಆಕೆ ಹತ್ತು ರೂಪಾಯಿ ಕೈಗಡ ಕೇಳಿದಳು. ಕಮಲಾ ಐದುರೂಪಾಯಿ ಕೊಡುವ ಭರವಸೆಯಿತ್ತಳು.

ಅದನ್ನೂ ಬೈಗಿನಲ್ಲಿ ಕೊಡುವೆನೆಂದು ಹೇಳಿದಳು ದುಡ್ಡು ಸಿಗುವದೆಂದು ತಿಳಿದಮೇಲೆ ಆಕೆಯ ಸಪ್ಪೆಯಾದ ಮುಖವು ಕಳೆಯೇರಿತು. ಧನವಿಲ್ಲದ್ದರಿಂದ ಆಕೆ ಮಗಳಿಗೆ ಔಷಧಿ ಕೊಡಿಸಿರಲಿಲ್ಲ. ನಂತರ ಅವರ ಮಾತಿನ ದಿಕ್ಕು ನೆರೆಮನೆಯವರ ಕಡೆಗೆ ತಿರುಗಿತು ಅವರ ಒಬ್ಬ ಮಗನು ಪಿಕೆಟಿಂಗ ಮಾಡಿದ್ದಕ್ಕಾಗಿ ಜೇಲು ಕಂಡಿದ್ದ ಮತ್ತೊಬ್ಬಳು, ಅವರ ಮಗಳು ಈಗಲೂ ಪಿಕೆಟಿಂಗಿಗೆ ಹೋಗುತ್ತಾಳೆ ಹೆಣ್ಣು ಹುಡಿಗೆಯಾದರೂ ಎಷ್ಟೆಂಥ ಧೈರ್ಯ! ಇತ್ಯಾದಿ ವಿಷಯಗಳು ಅವರ ಮಾತಿನಲ್ಲಿ ಅಡಕವಾಗಿದ್ದವು. ಈ ಸಲ ಪೂಜಾಹಬ್ಬಕ್ಕೆ ಆಕೆ ಬರಿಯ ಖಾದೀ ಒಟ್ಟೆಗಳನ್ನೇ ಕೊಳ್ಳಲು ನಿಶ್ಚಯಿಸಿದ್ದಳಂತೆ. ಆದರೆ ಖಾದಿಗೆ ವಿಪರೀತ ಬೆಲೆ; ಆಕೆ ಕಮಲಳ ಸಾಗಮುಯ ಅಂದಹನ್ನು ಬಣ್ಣಿಸಿದಳು ಆಗ ಒಳಗಿನಿಂದ ಚಂಪುವಿನ ಅಳುವ ಧ್ವನಿ ಕೇಲಿಬಂತು ಮಧ್ಯಾಹ್ನದ ಕೊನೆಯಿಲ್ಲದ ಹರಟೆ ಮಧ್ಯದಲ್ಲಿ ಮುಗಿದು ಹೋಯಿತು.

ಸುಮಾರು ಒಂದು, ಒಂದೂವರೆಯಾಗಿರಬೇಕು. ಕಮಲಾ ಅತ್ತೆಗೆ ಉಣ್ಣಲಿಕ್ಕೆ ಬಡಿಸಿದಳು. ನಂತರ ತಾನೂ ಊಟಕ್ಕೆ ಕುಳಿತಳು ಆಳುಗಳು ಊಟಮಾಡುವದೂ ಇದೇ ಸಮಯ; ಹೊರಗಡೆಗೆ ಕೂತು ಊಟಮಾಡಿದರು.

ಪಾತ್ರೆ ತಿಕ್ಕುವ ಹೆಣ್ಣುಮಗಳಿನ್ನೂ ಒಂದಿದ್ದಿಲ್ಲ; ಮನೆಯಲ್ಲಿ ಕೆಲವು ಹರಕು ಹುರಕು ಸರಿಮಾಡುವದಿತ್ತು; ಮಕ್ಕಳನ್ನು ಒಟ್ಟೆಹರಿಯುವದರಲ್ಲಿ ಸರಿಗಟ್ಟುವವರು ಮತ್ತೊಬ್ಬರಿಲ್ಲ. ಮನೆಯಲ್ಲಿಯೇ ನೂಲು ತೆಗೆದು ನೇಯಿಸಿದ ದಪ್ಪನ್ನ ಖಾದಿಯ ಬಟ್ಟೆಗಳನ್ನು ಹೊಲೆಯುವದು ತುಂಬಾ ಕಷ್ಟದ ಕೆಲಸ ಮೋಹ್ಯಾ ಮೈಮೇಲೆ ಬಟ್ಟೆಹಾಕಿಕೊಳ್ಳಲಿಕ್ಕೇ ಒಲ್ಲನು. ಒತ್ತಾಯದಿಂದ ಹಾಕಿದರೆ ಹರಿದು ಬಿಡುತ್ತಾನೆ. ಈಗ ಶರ್ಟ ಧರಿಸಲು ಮೊದಲು ಮಾಡಿದಂದಿನಿಂದ ಬಟ್ಟೆ ಜಗಿಯುವದನ್ನು ಸ್ವಲ್ಪ ಕಡಿಮೆ ಮಾಡಿದ್ದಾನೆ.

ಹೊತ್ತು ಹೋಳು ಬಿದ್ದಿದೆ; ಎಲ್ಲವೂ ಶಾಂತವಾಗಿದೆ. ನೆಲದ ಮೇಲೆ ಜಮುಖಾನೆಯೊಂದನ್ನು ಹಾಸಿರುತ್ತಾರೆ. ಚಂಪು ಅದರ ಮೇಲೆ ಮಲಗಿ ನಿದ್ರಿಸುತ್ತಿದ್ದಳು. ಆಕೆಯ ತಲೆಯ ಕೆಳಗೆ ಒಂದು ಪುಟ್ಟ ದಿಂಬು ಇತ್ತು. ಲಕ್ಕಿಮಾತ್ರ ತಾಯಿಯ ಬಳಿಯಲ್ಲಿ ಕುಳಿತು ಎಷ್ಟೋ ಅಸಂಬದ್ಧ ಪ್ರಶ್ನೆಗಳನ್ನು ಕೇಳುತ್ತ ಕುಳಿತಿದ್ದನು. "ಅವ್ವಾ, ನೀನು ದೊಡ್ಡವಳೊ ಇಲ್ಲವೆ

ಅಷ್ಟುದೊಡ್ಡವನೊ? ಅಪ್ಪನಂತೆ ನಿನಗೂ ಯಾಕೆ ಗಡ್ಡ-ಮೀಸೆಗಳಿಲ್ಲ? ಹೆಂಗಸರಿಗೆ ಗಡ್ಡಮೀಸೆಗಳಿರುವದಿಲ್ಲವೇ?........" ಆತನ ಪ್ರಶ್ನೆಗಳಿಗೆ ತಡೆಯಿರಲಿಲ್ಲ. ಕಮಲಾ ಆತನನ್ನು ಸನಿಯಕ್ಕೆ ಎಳೆದುಕೊಂಡು ಮುತ್ತುಕೊಟ್ಟು "ಹೇ, ತುಂಟಾ, ಹೋಗು ಮಲಗು, ನಿದ್ದೆ ಬಂದಿಲ್ಲವೆ?" ಎಂದು ಹುಸಿಗೋಪ ಪ್ರಕಟಿಸಿದಳು. ನಂತರ ಲಕ್ಕಿ ಬಾನ ಬಣ್ಣದ, ಚಿತ್ರಗಳಿದ್ದ ಮೂಲಾಕ್ಷರದ ಪುಸ್ತಕವನ್ನು ತಿರುವಿಹಾಕುತ್ತ ಎಷ್ಟೊ ಸಮಯ ಓದುವವನಂತೆ ನಟಿಸಿ ತನ್ನಷ್ಟಕ್ಕೆ ತಾನೇ ಮಾತನಾಡಿದನು. ಸ್ವಲ್ಪ ಹೊತ್ತಿನಲ್ಲಿಯೇ ಆತನು ತೂಕಡಿಸ ತೊಡಗಿದನು. ಕಮಲಾ ಅವನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಜೋಗುಳ ಹಾಡಿದಳು ಆತನು ನಿದ್ರೆಹೋದನು. ಮರುಕ್ಷಣದಲ್ಲಿ ಸಾವಕಾಶವಾಗಿ ಗುರುಕು ಹೊಡೆಯುವ ಕಿರಿ ಸದ್ದೂ ಕೇಳಬಂತು. ಪಾರಿವಾಳಗಳು ಹಂಚಿನ ಮೇಲೆ ಕುಳಿತು "ಗೊಟರ್, ಗೊಟರ್" ಸದ್ದು ಮಾಡುತ್ತಿದ್ದವು

ಸಂಪೂರ್ಣ ಮೌನ ಶಾಂತಿ. ಜನಸಂದಣಿಯಿಲ್ಲದ ಬೀದಿಯಲ್ಲಿ ಪ್ಯಾನ್ಸಿ ಸಾಮಾನು ಮಾರುವವನ ಕೂಗು ರಾಗರಾಗವಾಗಿ ಆಗಾಗ ಕೇಳಿಬರುತ್ತಿತ್ತು. ಪಟವೊಂದು ಗಾಳಿಯಲ್ಲಿ ಹಾರಾಡುತ್ತಿತ್ತು ಕೆಳಗೆ ಆಳುಗಳು ಮಲಗಿ ನಿದ್ರೆ ಹೋಗಿದ್ದರು. ಮೇಲೆ ಹುಡುಗರೂ ಮಲಗಿಕೊಂಡಿವೆ. ಮನೆಯಲ್ಲಿ ಎಲ್ಲೆಡೆಯಲ್ಲಿಯೂ ಶಾಂತಿ ನೆಲಸಿರುವದು. ಒಟ್ಟಾರೆ ಸೂರ್ಯ ಪ್ರಕಾಶಿಸುತ್ತಿದ್ದ. ಮಧ್ಯರಾತ್ರಿಯಂತೆ ಈ ಸಮಯ ಭ್ರಾಂತಿಯನ್ನು ತಂದೊಡ್ಡುತ್ತಿತ್ತು ಭ್ರಮರವೊಂದು ಸೊಕ್ಕಿನಿಂದ ಗೊಂಯ್ಗುಡುತ್ತ ಹಾರಾಡುತ್ತಿತ್ತು.

ಲಕ್ಕಿಗೆ ನಿದ್ರೆಯಾವರಿಸಲು ಅವನನ್ನು ಕಮಲಾ ಕೆಳಗೆ ಮಲಗಿಸುತ್ತಾಳೆ. ಅಷ್ಟರಲ್ಲಿ ಹೊಲಿಯುವದು ಬೇಸರವನ್ನು ತಂದೊಡ್ಡುವದು. ಬಟ್ಟೆಯ ಕಪಾಟಿನ ಕಡೆಗೆ ಲಕ್ಷಹೋಗುವದು. ಎಲ್ಲ ಬಟ್ಟೆ ಒಟ್ಟಾರೆ ಹೊರಗೆ ತೆಗೆದು ಧೂಳು ಝಾಡಿಸಿ, ನೀಟಾಗಿ ಕಾಣುವಂತೆ ಮಡಿಕೆ ಹಾಕಿ ಇಡುತ್ತಿದ್ದಳು. ಅವುಗಳಲ್ಲಿ ಒಂದು ಸಣ್ಣ ಬಾನಬಣ್ಣದ ಕರವಸ್ತ್ರ, ಮತ್ತೆರಡು ಸಣ್ಣ ಅಂಗಿಗಳು ಆಕೆಯ ದೃಷ್ಟಿಗೆ ಗೋಚರವಾದವು. ನೆಲದ ಮೇಲೆ ಕುಳಿತು ಅವುಗಳನ್ನು ಕೈಯಲ್ಲಿ ಹಿಡಿದುಕೊಂಡು ಎಷ್ಟೋ ಹೊತ್ತು ದಿಟ್ಟಿಸಿದಳು. ಆಕೆಗೆ ಹಿಂದಿನ ದಿವಸಗಳು ಜ್ಞಾಪಕಕ್ಕೆ ಬಂದವು. ಮನಸ್ಸಿನಲ್ಲಿ ಕೋಲಾಹಲವೆದ್ದಿತು; ಸಂಕಟವಾಯಿತು; ಕರಳಿಗೆ ಬಿಸಿನೀರೆರಚಿದಂತಾಯಿತು; ಯಾರೊ

ಒಡಲಲ್ಲಿ ಅನಿರೀಕ್ಷಿತವಾಗಿ 'ಅಲಗಿಕ್ಕಿ ತಿರುವಿ'ದಂತಾಯಿತ್ತು! ಆ ಬಟ್ಟೆಗಳು ಹಿರಿಯ ಮಗಳು ಸಣ್ಣವಳಿದ್ದಾಗ ಹೊಲಿಯಿಸಿದ್ದವು. ಇಲ್ಲಿಗೆ ಆ ಸಂಗತಿ ಹದಿನೈದು ಹದಿನಾರು ವರ್ಷಗಳ ಹಳವಾಯಿತು. ಒಂದು ವರ್ಷದ ಕೂಸಿದ್ದಾಗ ನ್ಯೂಮೋನಿಯಾ ಬೇನೆಯಿಂದ ತಟ್ಟಿಗೆ ಸತ್ತು ಹೋಗಿದ್ದಳು. ಹಿರಿಯ ಮಗಳು ತೀರಿಕೊಂಡ ದುಃಖವು ಹೃದಯದಲ್ಲಿ ಅದೆಷ್ಟೋ ನೆಲೆನಿಂತಿತ್ತು. ಜ್ಞಾಪಕಕ್ಕೆ ಬಂದಾಕ್ಷಣ ಅದು ಮರುಕಳಿಸುತ್ತಿತ್ತು. ದಿನಗಳೆಂದತೆ ದುಃಖದ ಒತ್ತರತೆಯೂ ಕುಂದಿತ್ತು, ಮೊದಲಿನಷ್ಟು ಮನಸ್ಸಿಗೆ ವೇದನೆಯಾಗುತ್ತಿರಲಿಲ್ಲ. ಹೀಗೆ ಎಷ್ಟೋ ಹೊತ್ತು ಕಮಲಾ ಕನಸಿನ ಸಾಮ್ರಾಜ್ಯದಲ್ಲಿ ಅಲೆದಾಡುವಳು. ಈಗ ಆ ಹುಡಿಗೆ ಬದುಕಿದ್ದರೆ ನೆರಮನೆಯ ನಳಿನೆಯಷ್ಟು ದೊಡ್ಡದಾಗುತ್ತಿತ್ತಲ್ಲಾ! ಈಗಾಗಲೆ ಲಗ್ನ ಪೂರೈಸಿದ್ದರೆ ಒಂದು ವರ್ಷದ ಕೂಸಿಗೂ ತಾಯಿಯಾಗಬಹುದಿತ್ತು. ಕೂಸು ಒಂದು ವರ್ಷದ್ದಿದ್ದರೇನಾಯಿತು? ಅದೆಷ್ಟು ಬಲಶಾಲಿಯಾಗಿ ಎರಡು ಮೂರು ವರ್ಷಗಳ ಕೂಸಿನಂತೆ ತೋರುತ್ತಿತ್ತಲ್ಲ! ಅದಕ್ಕಿದ್ದ ಸೌಂದರ್ಯವೇ ಒಂದು ತೆರ; "ಆ ತುಂಬುಗಲ್ಲಗಳ, ಬೊಗಸೆಗಣ್ಣುಗಳು, ತೀಡಿಟ್ಟಂತಿದ್ದ ಮೂಗು ಆ ತುಟಿಗಳೆರಡರ ನಡುವೆ ಯಾವಾಗಲೂ ಸುಳಿದಾಡುತ್ತಿದ್ದ ಮೃದುನಗೆ.. . " ಇತ್ಯಾದಿ ಆಕೆಯು ಕಣ್ಮುಂದೆ ಕಟ್ಟಿ ಒಂದು ಕ್ಷಣ ಅತ್ತಳು.

ಬಟ್ಟೆಗಳಿಗೆಲ್ಲ ಮಡಿಕೆಹಾಕಿ ಕವಾಟಿನಲ್ಲಿಟ್ಟು ಅದರ ಬಾಗಿಲ ಮುಚ್ಚಿದಳು ಅದರ ಪಕ್ಕದಲ್ಲಿಯೇ ಸೀರೆಯ ಸೆರಗನ್ನೇ ನೆಲದಮೇಲೆ ಹಾಸಿ ಅಡ್ಡಾದಳು. ಆಕೆ ಮನಸ್ಸಿನಲ್ಲಿ ಅದೆಷ್ಟೋ ವಿಚಾರಿಸಿದಳು. ಎಷ್ಟೋ ಕನಸು ಕಂಡಳು. ಒಂದು ಕ್ಷಣ ಮಲಗಿದಲ್ಲಿಂದ ಕಣ್ಣೊರಳಿಸಿ ಮಲಗಿ ನಿದ್ರೆಹೋದ ಲಕ್ಕಿ ಚಂಪಿಯರನ್ನು ದಿಟ್ಟಿಸಿ ಎವೆಮುಚ್ಚಿದಳು. ಜಡೆ ಸಡಿಲಾಗಿ ತಲೆಯ ಕೂದಲು ಗಾಳಿಯಲ್ಲಿ ಹಾರಿಾಡ ತ್ತ ನೆಲಕ್ಕೆ ಹೊಂದಿಸಿದ ಪಾಟೀಕಲ್ಲುಗಳನ್ನು ಗುಡಿಸುತ್ತಿದ್ದರೂ ಅದರ ಲಕ್ಷ್ಯ ಆಕೆಗಿರುವದಿಲ್ಲ ಗಾಳಿ ಒಳಗೆ ನುಗ್ಗುವಾಗ ಆಕೆಯುಟ್ಟ ಹಸಿರಂಚಿನ ಸೀರೆಯ ಚುಂಗು ಗಾಳಿಯಲ್ಲಿ ಹಾರಾಡುವದು, ಆಕೆಗೆ ನಿದ್ರೆ ಬಂತು.

ಕೈಸಾಲೆಯಲ್ಲಿಯ ಗಡಿಯಾರವು "ಟಿಕ್, ಟಿಕ್" ಸಪ್ಪಳವಾಡುತ್ತಿತ್ತು, ಹೊತ್ತು ಮೌನವಾಗಿ ಸರಿಯುತ್ತಿತ್ತು. ಮನೆ ತುಂಬ ಮೌನವೇ ಮೌನ; ಶಾಂತಿಯೋ ಶಾಂತಿ; ಕಮಲಾ ಆಗ ಸ್ವಪ್ನ ಅರಮನೆಯಲ್ಲಿ ಮಲಗಿದ ದೇವತೆಯಂತೆ ಕಂಗೊಳಿಸಿದಳು.

ಅನಿರೀಕ್ಷಿತವಾಗಿ ಜಡಿಮಳೆ ಜಡಿದಂತಾಯಿತು. ಮುಂಚೆಯ ಬಾಗಿಲು ಕಿರಕ್' ಎಂದು ಸದ್ದಾಯಿತು. ಮೋಧು ತೆರೆದನು. ಬಾಗಿಲಲ್ಲಿ ಕಾಲಿಡು ವದೇ ತಡ, ಹಾಡುತ್ತ, ಕುಣಿಯುತ್ತ, ಗದ್ದಲಮಾಡುತ್ತ ಮೋಹನನು ಪುಹಡಿಯನ್ನೇರಿ ಶಾಲೆಯಿಂದ ಬಂದನು. ಆತನ ಸದ್ದಿಗೆ ಮನೆಯಲ್ಲಿ ಮಲಗಿದ ಎಲ್ಲರೂ ಏಳಲೇಬೇಕು. ಕಮಲಾನ ಬಿಡುವಿಗೆ ಅದೇ ಕೊನೆ. ಚಂಪು ಎದ್ದು ಅತ್ತಳು. ಮಲಗಿ ಏಳುವಾಗ ಆಕೆ ಸ್ವಲ್ಪ ಅಳಲೇಬೇಕು. ಪುಸ್ತಕದ ಚೀಲವನ್ನು ನಿಂತಲ್ಲಿಂದಲೇ ಒಂದು ಮೂಲೆಯ ಕಡೆಗೆ ಬೀಸಿ ಮೋನ್ಯಾ ಆಕೆಯನ್ನು ತಟ್ಟಿದನು. ಆಕೆ ಸುಮ್ಮನಾದಳು. ಆಗ ಲಕ್ಕಿಯ ಮತ್ತು ಚಂಪಳ ಕೂದಲುಗಳಿಗೆ ಗಂಟುಹಾಕಲಿಕ್ಕೆ ಹತ್ತಿದನು. ಕಮಲಾ ಸಿಟ್ಟುಮಾಡಿದಳು. ಮೋನ್ಯಾ ತನ್ನ ಕೋಟಿನ ಜೇಬಿನಿಂದ ಎರಡು ಪೇರಲ ಹಣ್ಣುಗಳನ್ನು ತೆಗೆದು "ಅವ್ವಾ, ಈ ಹಣ್ಣುಗಳನ್ನು ನಿನಗಾಗಿ ತಂದಿದ್ದೇನೆ." ಎಂದು ಹೇಳುವನು. ಕಮಲಳ ಸಿಟ್ಟು ಇಳಿಯುವದು. ಮೋನು, ಬಟ್ಟೆ ಬದಲುಮಾಡಿ, ಕೈಕಾಲು ತೊಳೆಯಪ್ಪ, ನೋಡು ಹೇಗೆ ಕಾಣುವಿ. ಬೂದಿಯ ಗುಡ್ಡೆಯೊಳಗಿನ ಭೂತದಂತೆ" ಎಂದು ಹೇಳಿದಳು.

"ಅವ್ವಾ ನನಗೆ ಬಹಳ ಹಸಿವೆಯಾಗಿದೆ"

ಮೊದಲು ಕೈಕಾಲು ತೊಳೆದುಕೊ; ಹಾದಿಯೊಳಗಿನ ಧೂಳೆಲ್ಲ ನಿನ್ನ ಕಾಲಮೇಲೆಯೇ ಇರುವದು."

ಹೆಣ್ಣುಹುಡುಗರು ಸ್ವಲ್ಪ ತಡವಾಗಿ ಮನೆಗೆ ಬಂದರು. ಕೈಕಾಲು ತೊಳೆಯದೆ, ರಾಣು ಚಂಪುವಿನೊಂದಿಗೆ ಆಟವಾಡಲಿಕ್ಕೆ ಕೂಡುವಳು. ಶಾಲೆಯಿಂದ ಆಕೆ ಒಂದು ಹೂ ತಂದಿದ್ದಳು. ಅದನ್ನು ಚಂಪುವಿಗೆ ಕೊಟ್ಟಳು.

ಕಮಲಾ ಕೆಲಸಕ್ಕೆ ಪುನಃ ಸಿದ್ಧಳಾಗಬೇಕಾಯಿತು. ಹುಡುಗರೆಲ್ಲರೂ ಚೆನ್ನಾಗಿ ತಿಕ್ಕಿ ಕೈಕಾಲು ತೊಳೆದಿರುವರೊ ಇಲ್ಲವೆಂಬುದನ್ನು ಪರೀಕ್ಷಿಸಿ, ನಂತರ ಅವರಿಗೆ ತಿನ್ನಲಿಕ್ಕೆ ತಿಂಡಿಕೊಟ್ಟು ಚಂಪಿಗೆ ಹಾಲು ಕುಡಿಸಿದಳು

ಕತ್ತಲೆಯಾಗುತ್ತ ನಡೆಯುವದು. ಅಡಿಗೆ ಮನೆಯಲ್ಲಿ ಬೆಳಕು ಮಿನ್ನುಗುವದು. ಒಲೆ ಹೊತ್ತಿಸಿದರು. ಮನೆಯನ್ನೆಲ್ಲ ಹೊಗೆ ಮುಸುಕಿತು. ಕಮಲಾ ಅಡಿಗೆಯ ತಯಾರಿಗೆ ಕೋಪಮಾಡಿದಳು.

"ಎಷ್ಟು ಹೊತ್ತಾಗಿ ಬೆಂಕಿಮಾಡುವದು? ಅವರು ಬರುವ ಹೊತ್ತಾಯಿತು." ಆಕೆ ಪತಿಯು ಬರುವದರೊಳಗಾಗಿ ಸ್ನಾನಮಾಡಲೇಬೇಕು-ಅತ್ತೆ ಕರೆದಳು. ಬಾರೇ ಕಮಲಾ ಇಲ್ಲೆ, ನಿನ್ನ ಕೂದಲು ಕಟ್ಟುವೆ" ಬೇಡತ್ತೀ ನಾನೇ ಕಟ್ಟಿಕೊಳ್ಳುವೆ" ಎಂದು ಕಮಲಾ ಕನ್ನಡಿ ತಕ್ಕೊಂಡಳು. ಚಂಪು ಮಧ್ಯದಲ್ಲಿ ಬಂದು ಅವರಲ್ಲಿ ಇಣಿಕಿ ಹಾಕಲಿಕ್ಕೆ ಪ್ರಾರಂಭಿಸಿದಳು. ತನ್ನ ಪಡಿರೂಪ ಕಂಡು, ತನ್ನಲ್ಲಿಯೇ ಮುಗುಳುನಗೆ ನಕ್ಕಳು. ಅಧರ ಆನಿಕೆ ಹಿಡಿದು ಜಗ್ಗಿದಳು. ಕನ್ನಡಿ ಹಿಂದಕ್ಕೆ ಬಿತ್ತು ಕಮಲಳಿಗೆ ಕಡವೆನಿಸಿತು.

"ಚಂಪಾ ನೀನು ತುಂಟಕಾಣೆ........" ಎಂದೆನ್ನುತ್ತ ಕನ್ನಡಿಯನ್ನು ಪುನಃ ಸರಿಯಾಗಿರಿಸಿಕೊಂಡು. ತನ್ನ ಪ್ರತಿಬಿಂಬವನ್ನೇ ಕಂಡು ಒಂದು ಕ್ಷಣ ಅದನ್ನು ದಿಟ್ಟಿಸುಪರಲ್ಲಿಯೇ ಲೀನಳಾಗಿ, ಮಗ್ನಳಾದಳು

ಅವಳ ಅತ್ತೆ ಆಕೆಯ ಕೂದಲನ್ನು ನಿತ್ಯ ಹಿಕ್ಕಿ ಕಟ್ಟುವೆನೆಂದು ಕರೆಯುತ್ತಾಳೆ. ಆಕೆ ತಾನೇ ಹಿಕ್ಕಿ ಕಟ್ಟಿಕೊಳ್ಳುವಳು. ತಲೆ ಹಿಕ್ಕಿಕೊಂಡನಂತರವೂ ಆಕೆಯ ಮುಖದ ಮೇಲಿನ ಕುಂಕುಮ ಅಳಿಸಿರಲಿಲ್ಲ. ಅದನ್ನು ಗುರುತಿಸಿದ ಅತ್ತೆ "ನೀನು ಚಿರಮುತ್ತೈದೆವ್ವಾ, ನನ್ನಂತೆ ಮುಂಡೆಯಾಗುವದಿಲ್ಲ" ಎಂದು ಹರಸಿದಳು. ಕಮಲಾ ಪಾದಮುಟ್ಟಿ ಆಕೆಯನ್ನು ನಮಸ್ಕರಿಸಿ ಸ್ನಾನಕ್ಕೆ ಹೋದಳು. ಸ್ನಾನದನಂತರ ಮಧ್ಯಾಹ್ನ ಒಣಗಲಿಕ್ಕೆ ಹಾಕಿದ ಬಟ್ಟೆಗಳನ್ನು ಮಡಿಚಿ, ಕೋಣೆಯನ್ನು ಸ್ವಚ್ಛಮಾಡಿ ಪತಿಗಾಗಿ ಹಣ್ಣು, ತಿನಸುಗಳನ್ನು ಒಂದು ತಟ್ಟೆಯಲ್ಲಿ ಸಿದ್ಧಪಡಿಸಿದಳು. ಏನೇ ಮಾಡಿದರೂ ಆಕೆ ನೀಟಾಗಿ ಕಾಣುವಂತೆ ಸ್ವಚ್ಛವಾಗಿ ಮಾಡುತ್ತಾಳೆ.

ಪತಿದೇವನು ಬಂದನು. ತನಗಾಗಿ ಸಿದ್ಧಪಡಿಸಿದ ಫಲಹಾರವನ್ನು ಕಂಡು ಹರ್ಷಉಕ್ಕಿಬರುವದು. ಬಂದವನೇ ಕಮಲಳ ಕನ್ನಡಿಯಂಥ ಗಲ್ಲಕ್ಕೆ ಮುತ್ತು ಕೊಡುವನು. ಕಮಲಾ ನಾಚಿಕೆಯಿಂದ ಅಲ್ಲಿಂದ ಪಲಾಯನ ಮಾಡುವಳು. ಆತನು ಸಾವಕಾಶವಾಗಿ ತಿಂಡಿಯನ್ನು ತಿನ್ನುತ್ತ ಆಕೆಯನ್ನು ಕೂಗಿದನು. "ಏ, ಕಮಲಾ ಚಹವನ್ನು ಹಾಕಿಕೊಡುವದಿಲ್ಲವೇನೇ?" ಕಮಲಾ ಬಂದಳು. ಚಹವನ್ನು ಕಪ್ಪಿಗೆ ಬಾಗಿಸಿಕೊಟ್ಟು, ಆತನ ಹತ್ತಿರ ವಿದ್ದ ಒಂದು ಕಾಗದದಿಂದ ಮಡಿಚಿದ ಒಂದು ಪುಡಿಕೆಯನ್ನು ನೋಡಿದಳು.

"ಅದೇತರದು ? ಅದರಲ್ಲೇನಿದೆ?"

"ನಿನಗೊಂದು ಹೊಸಸೀರೆ ತಂದಿದ್ದೇನೆ"

"ಯಾವಾಗಲೂ ನಿಮ್ಮದು ಚೇಷ್ಟೆಯದೇ ಮಾತು, ಸೋಮ್ಯಾನಿಗೆ ದಪ್ಪ ಬಿಸ್ಕೀಟ ತಂದಿರಾ?"

"ಓಹೋ, ನೆನಪೇ ಆಗಲಿಲ್ಲ."

"ನಾಳೆಯಾದರೂ ನೆನಪಿನಿಂದ ತಕ್ಕೊಂಡು ಬರ್ರಿ. ಒಂದು ಮಾತು; ನೀವು ಇಂದು ನನಗೆ ಹತ್ತು ರೂಪಾಯಿ ಕೊಡಬೇಕು."

"ಯಾಕೆ, ಯಾರಿಗಾದರೂ ಕೈಗಡ ಕೊಡಬೇಕೆಂದಿರುವಿಯಾ?"

"ಇಲ್ಲ; ಮನೆಖರ್ಚಿಗೆ; ನನ್ನ ಹತ್ತರವಿದ್ದ ದುಡ್ಡೆಲ್ಲ ತೀರಿಹೋಗಿದೆ"

"ಕಮಲಾ, ದುಡ್ಡು ಸ್ವಲ್ಪ ಹಿಡತದಿಂದ ವೆಚ್ಚಮಾಡು, ಕಾಲ ಎಷ್ಟು ಕಠಿಣವೆಂಬುದು ಜ್ಞಾಪಕದಲ್ಲಿರಲಿ"

ಮನೆತನಕ್ಕೆ ಸಂಬಂಧಪಟ್ಟ ಇನ್ನೂ ಅನೇಕ ವಿಷಯಗಳನ್ನು ಮಾತನಾಡಿ, ಆಕೆಯ ಪತಿ ಬಟ್ಟೆಬದಲಿಸಿ, ಕೈಕಾಲು ತೊಳೆದು ಕನ್ನಡಿ ಎದುರಿನಲ್ಲಿ ನಿಂತು ಹಿಕ್ಕಿಕೊಂಡು ಪುನಃ ಡ್ರೆಸ್ಸಮಾಡಿಕೊಂಡು, 'ಯೂನಿಯನ್ ಕ್ಲಬ್ಬಿ'ಗೋ ಇಲ್ಲವೆ ಇಸ್ಪೇಟ ಆಡಲಿಕ್ಕೆ 'ಗೆಳೆಯರ ಗುಂಪಿ'ಗೋ ಹೋದನು.

"ಇಂದು ಮನೆಗೆ ಶೀಘ್ರ ಬರುವಿರಾ?" ಕಮಲಾ ಕೇಳಿದಳು.

"ಆಗಲಿ, ಬರುವೆ, ತಡವನ್ನೇನೂ ಮಾಡುವದಿಲ್ಲ." ಆದರೂ ಆವನು ಬರುವದು ಒಂಭತ್ತೂವರಿಗೆ ಇಲ್ಲವೆ ಹತ್ತು ಘಂಟೆಗೇನೆ.

ಕಮಲಳಿಗೇನೂ ಕೆಲಸಕ್ಕೆ ಕೊರತೆಯಿರಲಿಲ್ಲ. ಅಡಿಗೆಯವನಿಗೆ ಎಲ್ಲ ಸಾಮಗ್ರಿ ಒದಗಿಸಿ ಮನೆಯ ಮುಂದಿನ ತುಳಸೀ ಮಂಟಪದಲ್ಲಿ ಹಣತೆಯೊಂದನ್ನು ಹಚ್ಚಿ, ಐದು ಸುತ್ತು ಮಂಟಪವನ್ನು ಸುತ್ತುಹಾಕಿ, ಸಾಷ್ಟಾಂಗ ನಮಸ್ಕಾರ ಹಾಕಿದಳು. ತ್ವರೆಯಿಂದ ಅಡಿಗೆ ಮನೆಗೆ ಹೋಗಿ ಹಾಲು ಕಾಯಿಸಿದಳು. ಅಡಿಗೆಯವನೊಂದಿಗೆ ತಾನೂ ಕೆಲಸಕ್ಕೆ ನೆರವಾಗಲನುವಾದಳು. ಇಲ್ಲವಾದರೆ ಊಟಕ್ಕೆ ತಡವಾಗುವದೆಂದು ಆಗಲೇ ಹುಡುಗರ ಜಗಳ ಪ್ರಾರಂಭವಾಗಿರುತ್ತದೆ, ದೂರುಗಳು ಕಮಲಾನ ವರೆಗೂ ಬರುವವು. ರಾಣು, ಲಕ್ಷ್ಮಿ, ಚಂಪು ಇವರನ್ನು ಸಮೀಪಕ್ಕೆ ಉದ್ಯಾನಕ್ಕೆ ಕರೆದೊಯ್ದು ಸೋಧು ಬಂದಿದ್ದನು ಸೋಮ್ಯಾ ಯಾಕೆ ಆಡಲಿಕ್ಕೆ ಹೋಗುವನು ಕೈಯಲ್ಲಿ ಹಾಕಿಸ್ಟಿಕ್

ಹಿಡಿದುಕೊಂಡು ಎಲ್ಲರನ್ನು ಬಡಿಯುತ್ತಲೇ ಬಂದನು ಶೋಭಾ ಹತ್ತಿರದಲ್ಲಿ ಯಾರೋ ಗೆಳತಿಯರ ಮನೆಗೆ ಹೋದವಳು ಬಂದಿದ್ದಳು. ನಡುಮನೆಯಲ್ಲಿ ಗದ್ದಲವೇ ಗದ್ದಲ ಒಬ್ಬರು ಕುಣಿಯುತ್ತಾರೆ. ಮತ್ತೊಬ್ಬರು ರಾಗ ತೆಗೆದು ಒದರಾಡುತ್ತಾರೆ. ಇನ್ನೊಬ್ಬರು ಕೆಟ್ಟ ಧ್ವನಿದೆಗೆದು ಕಿರುಚುತ್ತಾರೆ. ಕಮಲಾ ಇವಾವುದರ ಕಡೆಗೆ ಲಕ್ಷಗೊಡಲಿಲ್ಲ. ಅಟ್ಟದ ಮೇಲೆ ಕುಳಿತ ಆಕೆಯ ಅತ್ತೆಯೇ “ ಏ ಕಮಲಾ, ಸ್ವಲ್ಪ ನೋಡೆ, ಯಾವ ಹುಡುಗರು ಅಳುತ್ತಾವ್ರ” ಎಂದು ಒದರಿದಳು. ಕಮಲಾ ಅಡಿಗೆ ಮನೆಯಿಂದಲೇ ಕೂಗಿ ಗದ್ದಲ ಮಾಡಬೇಡಿರೆಂದು ಎಚ್ಚರಿಕೆ ಕೊಡುತ್ತಾಳೆ. “ ಲಕ್ಕ್ಯಾ ತೂಕಡಿಸುತ್ತಿದ್ದಾನ” ಎಂದು ಹೇಳುತ್ತ ಮೋಧು ಅವನನ್ನು ಅಡಿಗೆ ಮನೆಗೆ ತಂದನು.

“ ಅವನಿಗಷ್ಟು ಊಟಕ್ಕೆ ಹಾಕಿಬಿಡು” ಎಂದು ಕಮಲಾ ಹೇಳಿದಳು.

ಊಟಕ್ಕೆ ಕೂಡುವದೊಂದೇ ತಡ, ಅವನ ನಿದ್ರೆ ಮಾಯವಾಗಿ ಬಿಡುತ್ತದೆ. ಆದು ಬೇಕು, ಇದು ಬೇಕೆಂದು ಹಟಮಾಡಿ, ಅಡಿಗೆ ಮನೆಯನ್ನೇ ತೀವ್ರ ಬಿಟ್ಟುಹೋಗುವದಿಲ್ಲ; ಹೊರಗೆ ನಡುಮನೆಯಲ್ಲಿ ಶಿಕ್ಷಕನೊಂದಿಗೆ ಅಭ್ಯಾಸವುಗಿಸಿ, ಅವನ ಅಣ್ಣ, ಅಕ್ಕಂದಿರು ಊಟಕ್ಕೆ ಬಂದರು. ಆಗಲೂ ಲಕ್ಕ್ಯಾ ಇನ್ನೂ ಅಡಿಗೆ ಮನೆಯಲ್ಲಿ ಉಣ್ಣುತ್ತಲೇ ಇದ್ದನು ಶೋಭಾ ಊಟ ಮುಗಿಸಿ ಬಂದು ಅವನ ಕೈಬಾಯಿ ತೊಳೆದಳು. “ಮಲಗಲಿಕ್ಕೆ ಹೋಗೋಣ, ಬಾ ” ಎಂದು ಅವನನ್ನು ಕರೆದೊಯ್ದಳು.

ಒದರಾಡುತ್ತ ಕೇಕೆ ಹಾಕುತ್ತ, ಅಟ್ಟವನ್ನು ಏರುವರು. ಕಮಲಾ ಚಂಪುವಿಗಾಗಿ ಒಂದು ಬಟ್ಟಲಿನಲ್ಲಿ ಹಾಲನ್ನು ಹಾಕಿಕೊಂಡು ಮೇಲೆ ಹೋಗುವಳು; ಆಗ ಎಲ್ಲರೂ ಹಾಸಿಗೆಯಲ್ಲಿ ತಮ್ಮ ತಮ್ಮ ಸ್ಥಾನಗಳಲ್ಲಿ ಹೊರಳಾಡುತ್ತಿದ್ದರು.. ಲಕ್ಕ್ಯಾ ತನ್ನ ನಾಲ್ಕೂ ದಿಂಬುಗಳನ್ನು ಬಲಕ್ಕೆ ಇಟ್ಟುಕೊಂಡು ಮಲಗಿದ್ದನು. ಮೋಹನನು ತನ್ನ ಶಾಲೆಯ ಸುದ್ದಿ ಒದರಿ ಹೇಳುತ್ತಿದ್ದನು. “ಗಟ್ಟಿಯಾಗಿ ಕೂಗಾಡಬೇಡ” ವೆಂದು ರಾಣು ಅವನಿಗೆ ಎಚ್ಚರಿಕೆಕೊಟ್ಟಳು; ಒಮ್ಮೆಲೇ ಲಕ್ಕ್ಯಾ ಹಾಸಿಗೆಯಿಂದ ಜಿಗಿದು ನೆಲದಮೇಲೆಕೂಡುವನು. ಹಾಸಿಗೆ ತಣ್ಣಗೆ ಇತ್ತು. ಹಾಸಿಗೆಯಮೇಲೆ ಹಾಸಿದ ಮ್ಯಾಣಗಮಟದಮೇಲೆ ಮಲಗುವದಿಲ್ಲವೆಂದು ಹಟಮಾಡಿದನು. ಅವನೇನು ಅದರಮೇಲೆ ಮಲಗಲಿಕ್ಕೆ ಚಂಪುವಿನಂತೆ ಕೂಸೆ?

ಮೋನು ಪ್ರಾರಂಭಿಸುವನು. "ಭೂಪ, ಒಲ್ಲನಂತೆ ಅದರ ಮೇಲೆಮಲಗಲು; ರಾತ್ರಿ ಹಾಸಿಗೆ ಒದ್ದೆಮಾಡಲಿಕ್ಕೆ ಹೇಳ್ರಿ ......."

ರಾಮು ಅಣಕಿಸಿದಳು. "ಮುದುಕನಾಗಿದೆಯಪ್ಪಾ, ನೀನೇನು ಕಡಿಮೆ ಆ ದಿನ ರಾತ್ರಿ.. ......" "ಮಚ್ಚು..... .....ನಾನು.. ....." ಅಷ್ಟರಲ್ಲಿ ಆ ದಿನದ ಸಂಗತಿ ನೆನಪಾಗಿ ತಾನು ಆ ವಿಷಯ ಪ್ರಾರಂಭಿಸಿದ್ದು ತನ್ನದೇ ತಪ್ಪಾಯಿತೆಂದು ಮೋನ್ಯಾ ಸುಮ್ಮನಾಗಿ ಬಿಟ್ಟನು.

ಚಂಪು ತಾಯಿಯ ತೊಡೆಯ ಮೇಲೆ ಮಲಗಿ ಹಾಲು ಕುಡಿದಳು ದೀಪ ದೊಡ್ಡದುಮಾಡಿದಳು. ಹುಡುಗರೆಲ್ಲರೂ ಸದ್ದಿಲ್ಲದೆ ಮಲಗಿದರು. ಪಡುವಿನ ಮನೆಯಲ್ಲಿಯ ಲಾಂದರುಮಾತ್ರಗೂಳಿಯಲ್ಲಿ ಹೊಯ್ದಾಡುತ್ತ ಉರಿಯುತ್ತಿತ್ತು. ಮನೆಯಲ್ಲಿ ಪುನಃ ಶಾಂತಿ ವ್ಯೆವೆತ್ತು ಬಂತು.

ಕಮಲಾ ಪತ್ರಿಕೆಯನ್ನಾಗಲೀ, ಇಲ್ಲವೆ ಕಸೂತಿ ಹೆಣೆಯುವಡನ್ನಾಗಲಿ ಹಿಡಿದು ನಡುಮನೆಯ ಪಾವಟಿಗೆಗಳ ಮೇಲೆ ಕೂತಳು ಅಂದು ಸಂಜೆಯ ಮುಂದೆ ಅಜಿತನಾಗಲಿ, ಸರೋದಾ, ನಿರ್ಮಲರಾಗಲೀ ಬರಲಿಲ್ಲವೆಂಬುದು ಆಕೆಯ ಜ್ಞಾಪಕಕ್ಕೆಬಂತು ಅವರೆಲ್ಲರೂ ನೆರೆಮನೆಯವರ ಮಕ್ಕಳು. ಕಮಲಳನ್ನು ಅಕ್ಕನೆಂದು ಕರೆಯುತ್ತಾರೆ. ಅಜಿತ, ನಿರ್ಮಲರು ಕಾಲೇಜಿಗೆ ಹೋಗುತ್ತಿದ್ದರು. ಅಜಿತ ಮೊದಲನೆಯವರ್ಷ ಸಾಯನ್ಸ ಕ್ಲಾಸಿನಲ್ಲಿದ್ದನು. ನಿರ್ಮಲಾ ಜ್ಯೂನಿಯರ ಬಿ. ಎ. ಕ್ಲಾಸಿನಲ್ಲಿದ್ದಳು. ಸರೋದಾ ಮ್ಯಾಟ್ರಿಕ್ ತರಗತಿಯಲ್ಲಿದ್ದಳು. ತರುಣ ಹುಡುಗ, ಹುಡಿಗೆಯರು, ಬಾಹ್ಯಪ್ರಪಂಚದಲ್ಲಿಯ ಸುದ್ದಿಗಳನ್ನು ಕೂಡಿಸಿ ತಂದು ಆಕ್ಕನಿಗೆ ಹೇಳಿ ಹರಟೆಕೊಚ್ಚಿ, ಅದಕ್ಕೆ ಪ್ರತಿಯಾಗಿ ಚಹವನ್ನು ಚಪ್ಪರಿಸುವರು. ಅವರೊಂದಿಗೆ ಹರಟೆಗೆ ಕೂಡುವದೆಂದರೆ ಕಮಲಳಿಗೆ ತುಂಬಾ ಇಷ್ಟ. ಮನೆಯಲ್ಲಿ ಖಂಡುಗ ಕೆಲಸವಿದ್ದರೂ ಅದನ್ನು ಬಿಟ್ಟುಬಿಡುವಳು. ಅವರಿಗಾದರೂ ಕಮಲಳಲ್ಲಿ ಅದೆಷ್ಟು ಭಕ್ತಿವಾತ್ಸಲ್ಯ! ಒಂದಿನವೂ ಆಕೆಯನ್ನು ಭೆಟ್ಟಿಯಾಗಲು ತಪ್ಪುವದಿಲ್ಲ. ಆದರೆ ಇಂದೇಕೋ ಒಬ್ಬರೂ ಎಡಬಲಸುಳಿಯಲಿಲ್ಲ.

ಕಮಲಾ ಪತ್ರಿಕೆಯಲ್ಲಿ ಒಂದು ಕತೆಯನ್ನು ಓದಲು ಪ್ರಾರಂಭಿಸಿದಳು. ಗಂಡ-ಹೆಂಡರಿಬ್ಬರಿಗೂ ಬಹಳ ದಿವಸ ಕೂಡಿನಡೆಯುವ ದಾಗುವದಿಲ್ಲ. ಹೆಂಡತಿ ಗಂಡನನ್ನು ಬಿಟ್ಟುಬಿಡಬೇಕೆಂದೆನಿಸುತ್ತಾಳೆ. ಈ ರೀತಿ ಕಥಾವಸ್ತು,

ಹೆಣ್ಣುಮಗಳೊಬ್ಬಳು, ಸಂಸಾರವನ್ನೂ ಗಂಡನನ್ನೂ ತ್ಯಜಿಸಿಹೋಗುವದು ನಾಚಿಕೆಗೇಡೆಂದು ಕಮಲಾಳ ಅಭಿಪ್ರಾಯ. ಮರುಕ್ಷಣದಲ್ಲಿ ಆ ಅಭಾಗಿನಿ ಹೆಣ್ಣಿಗಾಗಿ ಕಣ್ಣೀರುಕರೆಯುತ್ತಾಳೆ ಓದುವದು ಮುಗಿಯಿತು. ಮುಂದೆ ಓದಲು ಮನಸ್ಸಾಗಲಿಲ್ಲ. ಪತಿಯ ಕಾಲಸಪ್ಪಳ ಕೇಳಿಬಂತು ಕಣ್ಣೊರ ಸಿಕೊಂಡು ಪತಿಯನ್ನು ಸ್ವಾಗತಿಸಲು ಸಿದ್ಧಳಾದಳು. ಪತಿಯು ಬಂದನು.

ಸ್ವಾಮಿಗೆ ಊಟಕ್ಕೆ ಬಡಿಸಿ, ತಾನು ಊಟಕ್ಕೆ ಕೂಡಬೇಕಾದರೆ ಹನ್ನೊಂದು ಬಡಿಯಿತು ಆಳುಗಳೆಲ್ಲರೂ ಊಟಮಾಡಿದನಂತರ ಅಡಿಗೆ ಮನೆಯನ್ನು ಸಾರಿಸಿದೆಯೋ ಇಲ್ಲವೆಂಬುದನ್ನು ನೋಡಿ ಮುಂಚೆಯ ಬಾಗಿ ಲಕ್ಕೆ ಹೋಗಿ ಅಗಳೆ ಹಾಕಿದೆಯಿಲ್ಲವೋ ಎಂಬುದನ್ನು ಪರೀಕ್ಷಿಸಿ ಸರಕಿನ ಕೋಣೆಗೆ ಬೀಗಹಾಕಿಕೊಂಡು ಕೈಯಲ್ಲಿಯ ಎಲೆಯಡಿಕೆಯು ತಟ್ಟೆಹಿಡಿದು ಕೊಂಡು ಅಟ್ಟವನ್ನೇರಿ ಮೇಲೆ ಬಂದಳು. ಆಗಲೇ ಪತಿ ಹಾಸಿಗೆಯಲ್ಲಿ ಮಲಗಿ ಗೊರಕೆಹೊಡೆಯಲಿಕ್ಕೆ ಪ್ರಾರಂಭಿಸಿದ್ದನು.

ಕಮಲಾ ಹಾಗೆಯೇ ಸ್ವಲ್ಪ ಸಮಯ ಕಿಡಕಿಯಲ್ಲಿ ನಿಂತು ಹೊರಗೆ ದಿಟ್ಟಿಸಿದಳು. ಬಾನಿನಲ್ಲಿ ಚುಕ್ಕೆಗಳು ಥಳಥಳಿಸುತ್ತಿದ್ದವು ಮುಂದವಾರು ತನು ಗಿಡದೆಲೆಗಳನ್ನು ಅಲುಗಾಡಿಸಿ ಸಪ್ಪಳಮಾಡುತ್ತಿದ್ದನು. ಮಲಗಿ ನಿದ್ರೆ ಹೋದ ಮಕ್ಕಳ ಕಡೆಗೊಮ್ಮೆ ಹೊರಳಿನೋಡಿ, "ದೇವರು ನಿಮಗೆಲ್ಲರಿಗೂ ಸುಖಶಾಂತಿ ಒದಗಿಸಲಿ" ಎಂದು ದೇವರನ್ನು ಪ್ರಾರ್ಥಿಸಿದಳು

"ಕಮಲಾ, ಬಾ ಮಲಗು; ಈಗಾಗಲೇ ಹನ್ನೆರಡು ಬಡಿದುಹೋಗಿರ ಬೇಕು." ಎಂದು ಆಕೆಯ ಪತಿ ಎಚ್ಚೆತ್ತುಕರೆದನು. ಕಮಲಾ ಸಾವಕಾಶ ವಾಗಿ ಅಲ್ಲಿಂದ ಬಂದು ಚಂಪುವಿನ ಪಕ್ಕದಲ್ಲಿ ಮಲಗಿದಳು. ತಾಯಿತನದಲ್ಲಿ ಹಗಲು ಇರುಳನ್ನೂ ಇರುಳು ಹಗಲನ್ನೂ ದಾಟಿತು.

ಹೀಗೆಕೆ ಆಯಿತೆಂದು ಮೊದಲು ಕಮಲಾಗೆ ದಿಗಿಲೇ ಹಿತ್ತು. ಕಸ ಉಡುಗುವವರು, ನಗರ ಸಭೆಯವರ ಕಸತುಂಬುವ ಬಂಡಿ ಎಲ್ಲರೂ, ಎಲ್ಲವೂ ಹೋಗಿ ಈಗಾಗಲೇ ಒಂದು ಘಂಟೆಯ ಮೇಲಾಗಿತ್ತು; ಮೋಧು ತಾನಾ ಗಿಯೇ ಎದ್ದು ಪಾವಟಣಿಗೆ ತೊಳೆದು ಬಾಗಿಲ ಸಾರಿಸಿ, ಅಂಗಳಕ್ಕೆ ನೀರಿನ ಥಳಿ ಹೊಡೆದು ಎಷ್ಟೋ ಸಮಯ ಸಂದಿಹೋಗಿತ್ತು ಹೊರಗೆ ಆಗಲೇ ನಿಚ್ಚಳವಾಗಿ ಬೆಳಕಾಗಿತ್ತು. ಬಿಸಿಲೂ ಬಿದ್ದಿತ್ತು. ಆದರೂ ಇನ್ನೂ ಕಮಲಾ

ಹಾಸಿಗೆಯಲ್ಲಿ ಮಲಗಿಯೇ ಇದ್ದಳು. ಆಕೆ ಎದ್ದು ಸುತ್ತಲೂ ನೋಡಿದಳು. ನಾಚಿಕೆಯೆನಿಸಿತು; ಪತಿಯೂ ಎದ್ದು ಹಾಸಿಗೆಯಲ್ಲಿ ಕುಳಿತಿದ್ದ. ಮಕ್ಕಳು ಒದರಾಡುತ್ತಿದ್ದರು; ಪತಿ ಕೇಳಿದನು.

"ಕಮಲಾ, ಇಂದೇಕೆ ಇಷ್ಟು ಸಮಯದವರೆಗೆ ಮಲಗಿದ್ದಿ ?........ ಮೈಯಲ್ಲಿ ನೆಟ್ಟಗಿಲ್ಲವೆ?"

"ಯಾಕೆ ಒಂದು ದಿನವಾದರೂ ನಾನು ತಡಮಾಡಿ ಏಳಬಾರದೆ? ಬೆಳಗಿನಲ್ಲಿ ನಿತ್ಯ ಒಂದೇ ವೇಳೆಗೆ ಏಳಲಿಕೆ ನಾನೇನು ಯಂತ್ರವೆ? ಇಲ್ಲವೆ ಸೀಟಿಯಧ್ವನಿ ಕೇಳಿಸಿದ ಕ್ಷಣದಲ್ಲಿ ಓಡಿಹೋಗಿ ಕೆಲಸಕ್ಕೆ ಹತ್ತುವ ಕೂಲಿಯೆ? ಕಮಲಾ ನಸುನಕ್ಕು ಸ್ವಲ್ಪ ಗಡುಚಾಗಿಯೇ ಉತ್ತರವಿತ್ತಳು.

"ಇಲ್ಲ; ಹಾಗೆಂದು ನಾನು ಹೇಳಲಿಲ್ಲವಲ್ಲ!........"

ಕಣ್ಣುಜ್ಜುತ್ತ ಕಮಲಾ ಕೆಳಗೆ ಬಂದಳು. ಮನೆಯಲ್ಲಿ ಏನೊ ಅವ್ಯವಸ್ಥೆಯಾಗಿರಬೇಕೆಂದು ಊಹಿಸಿ ಹುಡುಗರು ಅಂದು ದಿಂಬಿನ ಕಾಳಗಕ್ಕೆ ಪ್ರಾರಂಭಿಸುವ ಸಾಹಸ ಮಾಡಿರುವದಿಲ್ಲ. ಮುಂಜಾನೆ ಕಮಲಾ ಆಯಾಸಪಟ್ಟವಳಂತೆ ಕಾಣುತ್ತಿದ್ದಳು. ರಾತ್ರಿ ಚೆನ್ನಾಗಿ ನಿದ್ರೆಮಾಡಿರಲಿಕ್ಕಿಲ್ಲ.

ಆಕೆ ಸ್ವಲ್ಪ ತಡವಾಗಿ ಎದ್ದುದರಿಂದ ಎಲ್ಲವೂ ಅವ್ಯವಸ್ಥೆಗಿಟ್ಟುಕೊಂಡಿತು. ಹತ್ತುಹೊಡೆದರೂ ಇನ್ನೂ ಅಡಿಗೆ ಮುಗಿದಿರಲಿಲ್ಲ. ಹುಡುಗರು ಬರಿಯ ಅನ್ನ ಹುಳಿತಿಂದು ಸಾಲೆಗೆ ಹೋಗಬೇಕಾಯಿತು. ಕಮಲಳಿಗೆ ಅತಿಕೆಡುಕೆನಿಸಿತು. ಆದನ್ನು ಮರುಕ್ಷಣದಲ್ಲಿ ಪ್ರತಿಭಟಿಸಿ ಸಮಾಧಾನ ಹಚ್ಚಿಕೊಂಡಳು. "ನಾನೇನೂ ಸಂಬಳಕೊಟ್ಟ ಆಳಲ್ಲ; ನನ್ನ ಮನಸ್ಸಿಗೆ ಬಂದಂತೆ ಮಾಡುವೆ" ಎಂದು. ಆಕೆಯ ಪತಿ ಸ್ನಾನಮಾಡಿ ಬಂದು, ಅಡಿಗೆಯವನಿಗೆ ಏನು ಸಿದ್ಧವಾಗಿದೆ ಅನ್ನದಷ್ಟೇ ಬಡಿಸೆಂದು ಹೇಳಿದನು.

ಕಮಲಾ ಅಂದು ಏನನ್ನೂ ತಿನ್ನಲಿಲ್ಲ. ಆಕೆಗೆ ಮೈಯಲ್ಲಿ ನೆಟ್ಟಗಿರಲಿಲ್ಲವೆಂದೆನಿಸಿತು. ಪೋಥು ಮತ್ತು ಅಡಿಗೆಯವನು ಆಕೆಗೆ ಊಟ ಮಾಡೆಂದು ಅಂಗಲಾಚಿ ಬೇಡಿಕೊಂಡರೂ, ವ್ಯರ್ಥವಾಯಿತು. ಅವರು ಸಹಿತ ಅಂದು ದಿನಕ್ಕಿಂತ ಕಡಿಮೆಯೂಟ ಮಾಡಿದರು. ಅತ್ತೆಯವರು "ಕಮಲಾ, ಮೈಯಲ್ಲಿ ನೆಟ್ಟಗಿರದಿದ್ದರೆ, ಹೋಗಿ ಕೆಳಗೆ ಮಲಗು" ಎಂದು ಹೇಳಿದರು. ಕಮಲಾ ತನ್ನಲ್ಲಿಯೇ ತಾನು ಅಂದುಕೊಂಡಳು. "ಆಕೆ

ಹಾಸಿಗೆಯಲ್ಲಿ ಮಲಗಿದರೆ ಯಾರು ಮನೆಗೆಲಸ ಮಾಡಬೇಕು?”

ಮಧ್ಯಾಹ್ನ ಬಿಡುವಿನಲ್ಲಿ ಆಕೆ ಹೆಣಿಗೆಯ ಕೆಲಸವನ್ನೂ ಮಾಡಲಿಲ್ಲ; ಓದಲೂ ಇಲ್ಲ. ಲಕ್ಕಿ ಏನೇ ಬೇಕಾಗಿ ಹಟಮಾಡಿ, ಅತ್ತು ಅತ್ತು ಯಾರೂ ಕೇಳದ್ದರಿಂದ ಮಲಗಿಬಿಟ್ಟನು.

ಕಮಲಳಿಗೆ ಅತಿಕೆಡುಕೆನಿಸಿತು. ಮೊದಲಿನ ಕೂಸಿನ ದುಃಖ ಮರುಕಳಿಸಿತು. ಆ ಕೂಸಿನ ಚಿಕ್ಕ ಪುಟ್ಟ ಬಟ್ಟೆಗಳನ್ನು ತೆಗೆದು ಎದೆಗೆ ಅಪ್ಪಿಕೊಂಡು ಎಷ್ಟೋ ಹೊತ್ತು ಅತ್ತಳು. ಯಾಕೆ ಇಂದು ಆ ಕೂಸಿನ ನೆನಪಾಗಿ ಅಳುತ್ತಿರುವಳೆಂಬುದು ಆಕೆಗೇ ಮೊದಲು ಗೊತ್ತಿರಲಿಲ್ಲ. ಕಣ್ಣೀರು ಮಿಡಿಯುತ್ತಲೇ ಇದ್ದಳು. ಹೃದಯವು ಭಾರವಾಗಿತ್ತು. ತನಗೆ ಇಂದು ಹೀಗೇಕೆ ಆಗಿರುವದೆಂದು ಮಿಂಚಿನಂತೆ ಹೊಳೆಯಿತು. ಮೊದಮೊದಲು ಆಕೆಯ ಮುಖವು ಗಂಭೀರವಾಗಿ ತೋರಿದರೂ ಕಡೆಗೆ ಅಪೂರ್ವ ಸೌಂದರ್ಯದಿಂದ ಕಳೆಯೇರಿದಂತೆ ಕಂಡುಬಂತು.

ರಾತ್ರಿ ಕಮಲಾ, ಎಲ್ಲ ಕೆಲಸ ಮುಗಿದ ಮೇಲೆ ಅಟ್ಟವನ್ನೇರಿ ಹೋದರೂ ಮಲಗುವ ಕೋಣೆಗೆ ಹೋಗಲಿಲ್ಲ ಕೆಂಪು ಅಂಚಿನ ಸೀರೆಯ ಸೆರಗನ್ನೇ ನೆಲದ ಮೇಲೆ ಹಾಸಿ ಆಕಾಶವನ್ನೇ ದಿಟ್ಟಿಸುತ್ತ ಮಹಡಿಯ ಮುಂದಿನ ಕೈಸಾಲೆಯಲ್ಲಿ ಮಲಗಿದರು. ನಕ್ಷತ್ರವೊಂದು ಜೋಲಿ ತಪ್ಪಿ ಉರಿಳಿತು, ಆಕೆಯ ಪತಿ ಬಂದು ಪಕ್ಕದಲ್ಲಿ ಕುಳಿತದ್ದನ್ನು ಆಕೆ ಗಮನಿಸಲಿಲ್ಲ. ಅವನು ತನ್ನ ಕೈಯನ್ನು ಆಕೆಯ ತಲೆಯಮೇಲಿಟ್ಟಾಗ, ಆ ಕೈಯನ್ನು ತನ್ನ ಕೈಗಳಲ್ಲಿ ಹಿಡಿದು ಮೃದುವಾಗಿ ಮಾತನಾಡಿದಳು.

“ಪ್ರಿಯಾ, ..........”

“ಆಂ ...............”

ಪತಿಯ ಮುಖವು ಆಕೆಯ ಮುಖದ ಬಳಿಸಾರಿತು. ಕಮಲಾ ಆತನ ಕಿವಿಯಲ್ಲಿ ಏನೇನೋ ಗುಂಯ್ಗುಟ್ಟಿದಳು; ಚುಕ್ಕೆ ತುಂಬಿದ ಬಾನು ಬೆಳಗುತ್ತಿತ್ತು.

ಆಕೆಯಪತಿ ನಕ್ಕು ಹೇಳಿದನು.

“ಇಷ್ಟೇನೆ ? ಮತ್ತೊಂದು; ........ಒಳ್ಳೇದೇ ಆಯಿತು. ಅಕ್ಕನಿಗೆ (ಕಮಲಳ ತಾಯಿ) ಬರೆದು ತಿಳಿಸುವೆ.

“ ಬೇಡ, ಪ್ರಿಯಾ ಅವಸರ ಬೇಡ, ಇನ್ನೂ .. —........”
ಪತಿ ಆಕೆಯ ತಾಂಬುಲ ತಿಂದುದರಿಂದ ಕೆಂಪಾದ ತುಟಿಗಳಿಗೆ ಮುತ್ತಿಟ್ಟ.

ಕಮಲಳಿಗೆ ಅಂದು ನಿದ್ರೆಯೇ ಬರಲಿಲ್ಲ. ಮಹಡಿಯ ಮೇಲೆಯೇ ಅತ್ತಿತ್ತ ಓಡ್ಯಾಡಿದಳು. ಕೈಸಾಲೆಯಲ್ಲಿ ಗೋಡೆಗೆ ತೂಗುಬಿದ್ದ ಚಿತ್ರಪಟಗಳಿಗೆ ನಮಸ್ಕರಿಸಿದಳು. ವಿದ್ಯಾಸಾಗರ, ಗಾಂಧಿ, ಚಿತ್ತರಂಜನ........” ಇತ್ಯಾದಿ ಮಹಾತ್ಮರಿಗೆ, ಆಕೆಯ ನಮಸ್ಕಾರದಲ್ಲಿ ಅವರಂಥ ಒಬ್ಬ ಮಗನು ತನ್ನಲ್ಲಿ ಹುಟ್ಟೀತೆಂಬ ಆಶೆಯು ದೂರದ ಕಿರಣವೊಂದು ಬೆಳಗುತ್ತಿತ್ತು. ಮಹಾಪುರುಷನನ್ನು ಹೆರೆಯುವ ಭಾಗ್ಯ ಆಕೆಯಲ್ಲಿದ್ದಿತೋ ಏನೋ ಕಾಣೆ. ಬಸಿರು ಹೆಂಗಸಿನ ಕನಸಿನ ರಾಜ್ಯದಲ್ಲಿ ಏನೇನು ನಡೆದಿವೆಯೆಂಬದನ್ನು ಅರಿತವನಾರು ?

ಕೊನೆಗೆ ತನ್ನ ಕನಸಿನ ಸಾಮ್ರಾಜ್ಯದಲ್ಲಿಯೇ ಮಗ್ನಳಾಗಿ ಆಕೆ ಮಲಗಿ ನಿದ್ರೆಹೋಗುವಳು. ಆಗಲೇ ಇರುಳಿನ ಬಹಳ ಭಾಗ ಸಂದು ಹೋಗಿತ್ತು; ಬೆಳ್ಳಿ ಮೂಡು ದಿಕ್ಕಿನಲ್ಲಿ ಉದಯಿಸಿತು; ಬೆಳಗಿನ ಥಳಿಯೂ ಬಿಟ್ಟಿತ್ತು; ಒಂದೆರಡು ಕೋಳಿಗಳು ಕೂಗಿದವು.



# ಸಾಕುತಾಯಿ



ವಿನೋದಿನಿಯ ರಂಗೂನದಲ್ಲಿ ಮೂರುನಾಲ್ಕು ವರ್ಷ ಇದ್ದಳು; ಆದರೂ ಆಕೆಯುಗಂಡ ರಂಗೂನ ಬಿಟ್ಟು ಕಲಕತ್ತೆಗೆ ಹೋಗಿ ವಾಸವಾಗೋಣವೆಂದಾಗ, ಆಕೆಯ ಮುಖದಲ್ಲಿ ಯಾವ ಬದಲಾವಣೆಗಳೂ ಕಂಡು ಬರಲಿಲ್ಲ; ತದ್ವಿರುದ್ಧವಾಗಿ ಹರ್ಷಿತಳಾಗಿದ್ದಂತೆಯೇ ಕಂಡುಬಂದಳು

"ಇಷ್ಟುದಿನಗಳವರೆಗೆ ಚಿಕ್ಕಂದದಿಂದ ಇಲ್ಲಿ ವಾಸವಾಗಿದ್ದೆವು; ಈಗ ಬಿಟ್ಟುಹೋಗಲು ನಿನಗೆ ದುಃಖವಾಗುವದಿಲ್ಲವೆ?" ಆಕೆಯ ಪತಿ ನೃಪೇಶ ಕೇಳಿದ. ವಿನೋದಿನಿಯು ಮೊದಲಿನಂತೆಯೇ ಮುಖಮಾಡಿ ಉತ್ತರವಿತ್ತಳು

"ಇಲ್ಲ, ದುಃಖವಾಗುವದಿಲ್ಲ; ಯಾಕೆ ದುಃಖವಾಗಬೇಕು? ಆದರೆ ........ನನಗ ಖೋಕಾನಿಗಾಗಿ ಮಾತ್ರ ಸ್ವಲ್ಪ ವ್ಯಸನವಾಗುತ್ತದೆ"

"ಖೋಕಾನಿಗಾಗಿ ಯಾಕೆ ವ್ಯಸನಪಡುವದು? ಹೇಗೂ ನಮ್ಮೊಂದಿಗೆ ಅವನು ಬರಬೇಕಲ್ಲ." ನೃಪೇಶನೆಂದ

"ಅವನು ಬರುತ್ತಾನೆ; ಅದು ನಿಜ. ಆದರೆ ಅವನ "ಅಮ್ಮಾ" ಬರುವದಿಲ್ಲ. ಆಕೆ ಇರದಿದ್ದರೆ ಅವನು ಊಟವನ್ನೂ ಮಾಡುವದಿಲ್ಲ; ಮಲಗುವದೂ ಇಲ್ಲ; ಆಕೆ ಇರದಿದ್ದರೆ ಅವನು ನನ್ನನ್ನು ಗೋಳಿಡಿಸಿ ಎರಡೇ ದಿನಗಳಲ್ಲಿ ಕೊಂದುಬಿಡುತ್ತಾನೆ. ತೀವ್ರ ಮರೆತುಬಿಡಲಿಕ್ಕೆ ಅವನೇನೂ ಇನ್ನೂ ಸಣ್ಣವನಲ್ಲ; ದೊಡ್ಡವನಾಗಿದ್ದಾನೆ. ಬೇರೆ ಯಾವ ಒಕ್ಕಲಗಿತ್ತಿಯೂ ಅವನಿಗೆ ಹಿಡಿಸುವದಿಲ್ಲ" ವಿನೋದಿನಿ ಅಂದಳು

ವಿನೋದಿನಿ ನೃಪೇಶರಿಗೆ ಖೋಕಾ ಒಬ್ಬನೇ ಮಗನು; ಆತನನ್ನು ಆಡಿಸಲಿಕ್ಕೆಂದು 'ಆಯಾ' ಎಂಬ ಹೆಸರಿನ ಒಕ್ಕಲುಗಿತ್ತಿಯೊಬ್ಬಳಿದ್ದಳು. ಮನೆಯಲ್ಲಿ ಎಲ್ಲರೂ ಆಕೆಯನ್ನು 'ಆಯಾ' ಎಂದೇ ಕರೆಯುತ್ತಿದ್ದರು. ಖೋಕಾ

ಮಾತ್ರ ಆಕೆಯನ್ನು "ಅವ್ಮಾ" ಎಂದು ಕರೆಯುತ್ತಿದ್ದ. ಆಯಾ ಮದ್ರಾಸದ ಕಡೆಯುವಳು; ಸುಮಾರು ಎರಡಿಪ್ಪತ್ತು ವರ್ಷ ವಯಸ್ಸಾಗಿರಬೇಕು, ಮುಗಿಲುಗಳಂತೆ ಕಪ್ಪು ವರ್ಣದವಳು; ಸ್ವಭಾವ ತುಂಬಾ ಸಿಡುಕು ಆಯಾ ನಿಜವಾಗಿಯೂ ಆಕೆಯ ಹೆಸರಲ್ಲ. ಆಕೆಯ ಮನೆಯವರು ಆಕೆಗೆ ಬೇರೊಂದು ಹೆಸರಿಟ್ಟು ಆ ಹೆಸರಿನಿಂದ ಕರೆಯುತ್ತಿರಬಹುದು ಆದರೆ ಇಲ್ಲಿ ಆಕೆಗೆ ಆಯಾ ಅವ್ಮಾ ಇವೇ ಹೆಸರುಗಳು. ಖೋಕಾ ಹುಟ್ಟಿದಾಗಲೇ ಆಕೆ ಊಳಿಗಕ್ಕೆ ಸೇರಿಕೊಂಡಿದ್ದಳು.

ಬ್ರಹ್ಮದೇಶ ಬಿಡಬೇಕೆಂದಾಗ ಸಂಕಟಕ್ಕಿಕ್ಕಿಕೊಂಡಿತು. ಆಯಾ ಆ ನಾಡನ್ನು ಬಿಡುವಂತಿರಲಿಲ್ಲ; ಖೋಕಾ ಆಯಾಳನ್ನು ಬಿಡುವಂತಿರಲಿಲ್ಲ; ಮಾಡುವದಾದರೂ ಏನು?

"ಏನೂ ಮಾಡಲಿಕ್ಕೆ ಬರುವಂತಿಲ್ಲ. ಕೆಲವು ದಿನಗಳವರೆಗಾದರೂ ಅವನ ಹಟವನ್ನು ಸೈರಿಸಿಕೊಳ್ಳಬೇಕು; ಆಕೆಯೇನೊ ಅವನನ್ನು ತನ್ನ ಸ್ವಂತ ಮಗನಂತೆ ಪ್ರೀತಿಸಬಹುದು; ಆದರೆ ಆಕೆಗೂ ಹೊಲಮನೆ, ಗೆಳತಿಯರು ಮತ್ತು ನೆಂಟರು ಇದ್ದಾರೆ ಅವರನ್ನು ಬಿಟ್ಟು ಇವನೊಬ್ಬನಿಗಾಗಿ ಬರಲು ಮನಸ್ಸಿಲ್ಲ." ನೃಪೇಶ ಹೇಳಿದ.

ವಿನೋದಿನಿ ಕೇಳಿದಳು.

"ಒಂದು ಮಾತು ಆಕೆಯನ್ನು ಕೇಳೋಣ, ಅದರಲ್ಲೇನು ಒತ್ತಾಯ ಪಡಿಸುವದು ಬೇಡ; ಬೇಕಾದರೆ ಬರಲಿ, ಇಲ್ಲವಾದರ ಬಿಡಲಿ. ಈಕೆ ಹೇಗೂ ಹೆಂಗಸು; ಹೆಂಗಸಿಗೆ ಪ್ರೇಮುಕ್ಕಾಗಿ, ಮನೆ ಗೆಳತಿಯರು, ಆಪ್ತಿಷ್ಟರನ್ನು ತೊರೆಯುವುದು ಹೊಸತೇನು ಅಲ್ಲ"

"ಸರಿ; ನಿನಗೆ ತಿಳಿದಂತೆ ಮಾಡು." ನೃಪೇಶಕಡೆಗೊಮ್ಮೆ ಸೋತನು.

ಅದೇ ಹೊತ್ತಿಗೆ ಸರಿಯಾಗಿ ಖೋಕಾ ಬೆಳಗಿನ ತಿರುಗಾಡುವದನ್ನು ತೀರಿಸಿಕೊಂಡು ಆಯಾಳೊಂದಿಗೆ ಬಂದನು; ವಿನೋದಿನಿ ಮೊದಮೊದಲು ಹಿಂಜರಿದಳಾದರೂ, ಆಯಾಳೊಂದಿಗೆ ನಂತರ ಈ ಪ್ರಸ್ತಾಪವೆತ್ತಿದಳು

• ಆಯಾ ಸ್ವಲ್ಪ ಸಮಯ ಮೌನಳಾಗಿದ್ದಳು; ಬಹಳ ಮಾಡಿ ಆಕೆ ಸಾಧಕಬಾಧಕಗಳ ವಿಷಯವಾಗಿ ಮನದಲ್ಲಿ [illegible]ಚಿಸಿದ್ದಿರಬಹುದು. ನಂತರ ಒಂದು ನಿಟ್ಟುಸಿರಿನೊಂದಿಗೆ ಆಕೆ ಹೇಳಿದಳು.

"ಅಮ್ಮಾ, ಬರುವೆ"

ವಿನೋದಿನಿಗೆ ಆಶ್ಚರ್ಯವಾಯಿತು. ಆಯಾ ಒಪ್ಪುತ್ತಾಳೆಂದು, ಅದೂ ಇಷ್ಟು ತೀವ್ರ ಒಪ್ಪುತ್ತಾಳೆಂದು ಆಕೆಯ ಕನಸುಮನಸ್ಸುಗಳಲ್ಲಿ ತಿಳಿದಿರಲಿಲ್ಲ. "ನಾನು ನಿನ್ನ ಸಂಬಳ ಹೆಚ್ಚಿಸುವೆ"ನೆಂದು ವಿನೋದಿನಿ ಮಾತುಕೊಟ್ಟಳು.

"ನನಗೇನೂ ಹೆಚ್ಚಿಗೆ ಸಂಬಳ ಬೇಕಾಗಿಲ್ಲ; ಮೊದಲಿನಂತೆ ಇಪ್ಪತ್ತೇ ರೂಪಾಯಿಗಳನ್ನು ಕೊಡಿರಿ; ಹೆಚ್ಚಿಗೆ ರೊಕ್ಕಸಿಗುವದೆಂಬ ಆಶೆಯಿಂದ ನಾನು ಬರುತ್ತಿದ್ದಿಲ್ಲ" ಎಂದು ಅನ್ನುತ್ತ ಆಕೆ ಶೋಕಾನನ್ನು ಕೊಂಕುಳದಲ್ಲಿ ಎತ್ತಿಕೊಂಡು ಮತ್ತೆ ತಿರುಗಾಡಲಿಕ್ಕೆ ಹೊರಟಳು. ಆಗ ಮಧ್ಯಾಹ್ನವಾಗಿ ಕೆಟ್ಟ ಬಿಸಿಲಿದ್ದರೂ ವಿನೋದಿನಿ ಬೇಡವೆನ್ನಲಿಲ್ಲ. ಆಯಾ ಬರುವೆನೆಂದು ಒಪ್ಪಿದ್ದೇ ಒಂದು ದೊಡ್ಡ ಭಾರ ಇಳಿಸಿಕೊಂಡಂತಾಗಿತ್ತು; ಅವಳ ಮಗನನ್ನು ರಂಬಿಸುವದು ಯಾರಿಂದಲೂ ಸಾಧ್ಯವಿರಲಿಲ್ಲ. ಹಗಲಿನಲ್ಲಿ ತಾಯಿ ಹೇಗಾದರೂ ಮಾಡಿ ಅವನನ್ನು ಹಿಡಿಯಬಹುದಾದರೆ ರಾತ್ರಿಯಲ್ಲಿ ಹಿಡಿಯುವದು ಆಕೆಯಿಂದಲೂ ಸಾಧ್ಯವಿರಲಿಲ್ಲ, ಯಾರನ್ನೂ ರಾತ್ರಿಯಲ್ಲಿ ಮಲಗಿ ನಿದ್ರೆಮಾಡಗೊಡುತ್ತಿರಲಿಲ್ಲ ಶೋಕಾ; ಕೆಲಕೆಲವು ರಾತ್ರಿಗಳಲ್ಲಿ ಎಂಟು ಹತ್ತು ತಾಸುಗಳವರೆಗೆ ದೊಡ್ಡ ಧ್ವನಿದೆಗೆದು ಕೂಗಲಿಕ್ಕೆ ಮೊದಲು ಮಾಡಿಬಿಡುತ್ತಿದ್ದ ಎಷ್ಟು ಬೈದರೂ ಹೊಡೆದರೂ ಅವನ ಕೂಗಿಗೆ ಅವು ಪ್ರತಿಬಂಧ ಮಾಡುತ್ತಿರಲಿಲ್ಲ. ರಾತ್ರಿಯಲ್ಲಿಯೂ ಅವನನ್ನು ಹೊತ್ತು ಯಾರಾದರೂ ತಿರುಗಾಡಲೇ [illegible]ಕಿತ್ತು. ರಾತ್ರಿ ಆಡ್ಡಾಡಲು ಸಮಯವಲ್ಲವೆಂಬುದು ಅವನಿಗೇನು ಗೊತ್ತು! ಒಂದು ರಾತ್ರಿ ನೃಪೇಶನ ಎಲ್ಲ ಸ್ಟೈ[illegible]ಣೆ ಸಮಿತೆಗೆಟ್ಟಿತು. ಕೆನ್ನೆಗೆ '[illegible]ಟರೆ'ಂದು ಒಂದೆರಡು ಸಲ ಬಿಗಿ[illegible] ಅದರಿಂದ ಅವನು ಸುಮ್ಮನಾಗ[illegible]ದಕ್ಕೆ ಬದಲಾಗಿ ಇನ್ನೂ ಹೆಚ್ಚಾಗಿ ಅಳುವದಕ್ಕೆ ಮೊದಲಿಟ್ಟ. [illegible]ಸುವದನ್ನು ಕೊ[illegible]ಟ್ಟ ಊದುವದನ್ನು ಕೊಂಡಂತಾಯಿತು ಅಂತೂ ಆ ರಾತ್ರಿ ನೃಪೇಶನಿಗೆ ನಿದ್ರೆಯೇ ಇರಲಿಲ್ಲ.

ಮುಂಜಾನೆ ಆಯಾ ಬಂದು ಈ ಸುದ್ದಿಕೇಳಿ ಮನದಲ್ಲಿ [illegible]ನೊಂದು, ರಂಗೂನದ ಬೀದಿಗಳಲ್ಲಿಯೇ ನೃಪೇಶನನ್ನು ಶಪಿಸಿದಳು. ಇಡೀಮುದಿನ ಶೋಕಾನನ್ನು ಅಂದು ಯಾರ ಕೈಗೂ ಕೊಡಲಿಲ್ಲ.

ನಿತ್ಯದಂತೆ ವಿನೋದಿನಿ ಬೈಗಿನಲ್ಲಿ ತನಗೂ ಖೋಕಾನಿಗೂ ತೀವ್ರ ಊಟಕ್ಕೆಮಾಡೆಂದು ಅಡಿಗೆಯ ಆಳು ಹರನಾಥನಿಗೆ ಹೇಳಿದಳು. ಆಯಾ ಬೈಗಿನಲ್ಲಿ ಏಳುವರೆ ಘಂಟೆಗೆ ತನ್ನ ಮನೆಗೆ ಹೋಗುತ್ತಿದ್ದಳು. ಅಷ್ಟರಲ್ಲಿಯೇ ವಿನೋದಿನಿ ರಾತ್ರಿಯೂಟ ತೀರಿಸಬೇಕಾಗಿತ್ತು. ಇಲ್ಲವ ವರೆ ಆಕೆಗೆ ಅಂದು ಊಟಕ್ಕೆ ಕೂಡಲು ಸಮಯವೇ ಸಿಕ್ಕುತ್ತಿರಲಿಲ್ಲ. ಅವಳ ಮಗನ ಕಾಟವೇ ಸಾಕಷ್ಟಿರುತ್ತಿತ್ತು. ಆಯಾ ಖೋಕಾನಿಗೆ ಉಣ್ಣಿಸಿ, ಮಲಗಿಸಲು ಮಗ್ಗುಲ ಕೋಣೆಗೆ ಹೋದಳು.

ಖೋಕಾ ಮಲಗಿದೊಡನೆಯೇ ಆಯಾ ಹೋಗಿಬಿಡುತ್ತಿದ್ದಳು. ವಿನೋದಿನಿ ಊಟಮಾಡಿ ಖೋಕಾನ ಬಳಿಗೆ ಬಂದಾಗ ಆಯಾ ಇನ್ನೂ ಮನೆಯಲ್ಲಿಯೇ ಇದ್ದಳು. ಆಕೆ ಖೋಕಾನೊಂದಿಗೆ ಹರಿದ ಚಾಪೆಯ ಮೇಲೆ ಮಲಗಿದ್ದಳು. ವಿನೋದಿನಿ ಆಶ್ಚರ್ಯಚಕಿತಳಾಗಿ ಕೆಲವು ಸಮಯ ನಿಂತು ಕಡೆಗೆ ಆಯಾಳನ್ನು ಎಬ್ಬಿಸಿ, “ ನೀನು ಮನೆಗೆ ಹೋಗುವದಿಲ್ಲವೇ ? ” ಎಂದು ಕೇಳಿದಳು.

ಆಯಾ, ಆಕಳಿಸಿ ಎದ್ದು ಕುಳಿತಳು. ಅಲ್ಲಿಯೇ ಇರುವದಾಗಿ ಆಕೆ ತಿಳಿಸಿದಳು. ರಾತ್ರಿಯಲ್ಲಿ ಖೋಕಾನನ್ನು ಬಡಿಸಿಕೊಳ್ಳಲು ಬಿಡವದಿಲ್ಲ; ಒಡೆಯ ಒಡತಿಯರು ಮಲಗಲಿ, ತಾನು ಮಗುವನ್ನು ಆಡಿಸುವೆ; ಒಡತಿಯರು ರಾತ್ರಿ ಊಟಕ್ಕೆಂದು ನಾಲ್ಕು ಕಾಸುಕೊಟ್ಟರೆ ರೊಟ್ಟಿಕೊಂಡು ತಿಂದು ಅಲ್ಲಿಯೇ ಇರುವುದಾಗಿ ತಿಳಿಸಿದಳ.

ಅಂದು ವಿನೋದನಿಗೆ ಅತ್ಯಾನಂದವಾಯಿತು. ಆಯಾಳಿಗೆ ನಾಲ್ಕು ಕಾಸಗಳಿಗೆ ಬದಲಾಗಿ ನಾಲ್ಕು ಆಣೆಗಳನ್ನು ಕೊಟ್ಟಳು. ನೃಪೇಶ ವಿನೋದಿನಿಯರಿಗೆ ಅಂದಿನಿಂದ ಖೋಕಾನು ರಾತ್ರಿಯಲ್ಲಿ ಕೊಡುವ ಕಿರುಕುಳ ತಪ್ಪಿದವು. ಅವರ ಸ್ಥಾನ ಆಯಾ ಆಕ್ರಮಿಸಿದಳು. ರಾತ್ರಿಯ ಬಹಳ ಭಾಗವನ್ನು ಆಕೆ ಆತನನ್ನು ಹೊತ್ತುಕೊಂಡೇ ತಿರುಗಾಡುವದರಲ್ಲಿ ಕಳೆಯುತ್ತಿದ್ದಳು. ಇಡೀಯ ಇರಳು ಕೂಸನ್ನು ಕೊಂಕುಳಲ್ಲಿಟ್ಟು ತಿರುಗಿದ್ದರೂ ಬೆಳಗಿನಲ್ಲಿ ಹುರುಪಿನಿಂದಲೇ ಇರುತ್ತಿದ್ದಳು. ಹಗಲಿನಲ್ಲಿ ಎಂದೂ ಸೋಮಾರಿತನದಿಂದ ಕಣ್ಣುಚ್ಚಿಕೊಳ್ಳುತ್ತಿರಲಿಲ್ಲ. ಮೊದಲಿನಂತೆಯೇ ಕೆಲಸ ಮಾಡುತ್ತಿದ್ದಳು. ವಿನೋದಿನಿಗೆ ಇದನ್ನು ಕಂಡು ಸ್ವಲ್ಪ ಮನಸ್ಸಿಗೆ ಕೆಡುಕೆನಿಸಿ ಸಂಬಳ ಹೆಚ್ಚಿಸುವದಾಗಿ ತಿಳಿಸಿದಳು. ಆಯ ಒಪ್ಪಲಿಲ್ಲ. ಈ ಜಗತ್ತಿನಲ್ಲಿ ತಾನೊಬ್ಬಳೇ ಆ ಹಣವನ್ನೇನು ಮಾಡಲಿ ಎಂದು ಹೇಳಬಿಡುತ್ತಿದ್ದಳು

ಹೀಗೆ ಕೆಲವು ದಿನ ಸಾಗಿದ್ದವು; ಬ್ರಹ್ಮದೇಶ ಬಿಡುವ ವಿಚಾರಬಂತ ಈ ವಿಚಾರವೂ ಕೂಡ ಆಯಳನ್ನು ಖೋಕಾನಿಂದ ಅಗಲಿಸಲು ಅಂಜಿತ ನೃಪೇಶನು ಬಂದಕೂಡಲೇ ವಿನೋದಿನಿ ಅವಸರದಿಂದ ಈ ಸುದ್ದಿ ತಿಳಿಸಲೀ ಓಡಿಹೋಗಿ ಅವನಿಗೆ ಹೇಳಿದಳ

"ನೋಡಿ, ಖೋಕಾ ಆಕೆಯನ್ನು ಅಮ್ಮನೆಂದು ಕರೆಯುವದು ಸ ಯಾಗಿಯೇ ಇದೆ ಹಿಂದಿನ ಜನ್ಮದಲ್ಲಿ ನಿಜವಾಗಿಯೂ ಆಕೆ ಇವನನ್ನು ಹೆತ್ತ ಅಮ್ಮನೇ ಆಗಿರಬೇಕು. ಇಲ್ಲವಾದರೆ ಆಕೆ ಎಂದೂ ಆತನಿಗಾ ಇಷ್ಟು ತ್ಯಾಗಮಾಡುತ್ತಿರಲಿಲ್ಲ"

ನೃಪೇಶ ಬೇರೆ ಮಾತ್ರೊಂದು ವಿಷಯ ತೆಗೆದ. ಆ ವಿಷಯವನ್ನೇ ಬೆ ಲಿಸುವವರೆಗೆ ವಿನೋದಿನಿ ಆಕೆಯ ಪ್ರಶಂಶೆಯನ್ನೆ ನಡಿಸಿದ್ದಳು

ಹೊರಡುವ ದಿನ ನಿಶ್ಚಯಿಸಲ್ಪಟ್ಟಿತು ವಿನೋದಿನಿ ಬಹಳ ಕಷ್ಟ ಪಟ್ಟು ಮನೆಯ ಸಾಮಾನುಗಳನ್ನೆಲ್ಲ ಕಟ್ಟಿದಳು ಆಯಳಿಗೆ ತನ್ನ ಸಾಮಾನು ಕಟ್ಟಲು ಆಯಾಸವಾಗಲಿಲ್ಲ. ಏಕೆಂದರೆ ಆಕೆಯಲ್ಲಿ ಇದ್ದ ಸಾಮಾನು ಬರಿಯ ಒಂದು ಬುಟ್ಟಿಯತುಂಬ; ಖೋಕಾನನ್ನು ಬಗಲಿನಲ್ಲಿಟ್ಟುಕೊಂಡು ರಂಗೂನದ ಬೀದಿಗಳಲ್ಲೆಲ್ಲ ಅಂದು ಓಡಾಡಿ ಬಂದಳು ಈ ನಾಡು ಆಕೆಯ ಜೀವನದ ಸ್ವತ್ತಾಗಿತ್ತು ಅದನ್ನು ಆಕೆ ಇಂದು ಬಿಡುತ್ತಾಳೆ ಅವಳು ತಿರುಗಿ ಬರುವಳೋ ಇಲ್ಲವೊ ದೇವರೊಬ್ಬನೇ ಬಲ್ಲ

ಹಡಗದಲ್ಲಿ ಸಾಗಿದರು ಆಯಳಿಗೆ ಇದು ಮೊದಲಿನ ಸಮುದ್ರ ಪ್ರಯಾಣವಾಗಿತ್ತು ಒಮ್ಮೆಲೇ ತಲೆ ತಿರುಗಿ ಹಡಗದಲ್ಲಿ ಬಿದ್ದಳು. ಆದ್ದರಿಂದ ಖೋಕಾನನ್ನು ಆಡಿಸುವವರು ಇಲ್ಲದಾಯಿತು ಅವನ ತಾಯಿ ಅವನನ್ನು ರಮಿಸಲು, ಕಿತ್ತಳೆ ಹಣ್ಣು, ಬಿಸ್ಕೀಟು, ಸೀ ತಿನಸುಗಳನ್ನು ಲಂಚಕೊಟ್ಟರೂ ಸಾಧಿಸಲಿಲ್ಲ. ನೃಪೇಶ ಅವನನ್ನು ವಿನೋದಿನಿಯಿಂದ ಕಿತ್ತುಕೊಂಡ. ಆಗ ಆಯಳಿಗೆ ಎಚ್ಚರವಾಯಿತು. ತಂದೆಯಿಂದ ಮಗುವನ್ನು ತಕ್ಕೊಂಡು ಹಡಗದಲ್ಲಿಯೇ ಅತ್ತಿಂದಿತ್ತ ಓಡಾಡುತ್ತಿದ್ದಳು.

ಇದೇ ರೀತಿಯಾಗಿ ಹಡಗದಲ್ಲಿ ಮೂರು ದಿನಗಳು ಕಳೆದವು ಕಲಕತ್ತೆಗೆ ಬಂದಾಗ ವಿನೋದಿಗೆ ಬಹಳ ಆನಂದವಾಯಿತ. ನೃಪೇಶನು ತನ್ನ ಗೆಳೆಯರನ್ನು ನೆಂಟರನ್ನು ಕಾಣುವದರಲ್ಲಿ ತುಂಬಾ ಆತುರನಾಗಿದ್ದ. ಖೋಕಾ, ಆಯರಿಬ್ಬರು ಮಾತ್ರ. ಕಲಕತ್ತೆಗೆ ಅಪರಿಚಿತರಾಗಿ, ಇಳಿದ ಮುಖವುಳ್ಳವರಾದರು.

ಎಂಥದೇ ಪರಿಸ್ಥಿತಿಗಾದರೂ ಪ್ರತಿಯೊಬ್ಬನು ಕೆಲದಿನಗಳಲ್ಲಿ ಹೊಂದಿಕೊಳ್ಳುತ್ತಾನೆ. ಕ್ರಮೇಣ ಆಯಳಿಗೆ ಮಾರ್ಗ, ಬೀದಿಗಳೆಲ್ಲವೂ ಪರಿಚಿತವಾದವು. ಕೆಲವು ಅಂಗಡಿಕಾರರ ಪರಿಚಯ ವೂ ಆಯಿತು; ಎಲ್ಲಿ ಸಾಮಾನು ಕಡಿಮೆ ಬೆಲೆಗೆ ಸಿಕ್ಕುವದು, ಎಲ್ಲಿ ಹೆಚ್ಚು ಬೆಲೆಗೆ ಸಿಕ್ಕುವದು ಎಂಬುದರ ಎಲ್ಲ ಅನುಭವವಾಗಿತ್ತು. ನೆರೆಹೊರೆಯವರೂ, ಆಯಳಿಗೆ ಬಂಗಾಲಿ ನುಡಿ ಬಾರದಿದ್ದರೂ, ಕೈ ಬಾಯ ಸನ್ನೆಗಳಿಂದ ಮಾತನಾಡಿಸುತ್ತ ಸಂಗಡಿಗರಾದರು. ಕೆಲವು ದಿನಗಳಲ್ಲಿ ಎಲ್ಲವೂ ಸರಿಹೋಯಿತು. ಏತರ ವಿಷಯಕ್ಕೂ ಆಕೆಗೆ ಕೊರತೆ ಬರಲಿಲ್ಲ. ತನ್ನ ದೈವದಲ್ಲಿ ಇಲ್ಲಿಯೂ ಇರಬೇಕಾಗಿ ಬರೆದಿತ್ತು. ಅದು ಹೇಗೆ ತಪ್ಪುತ್ತದೆಯೆಂದು ಸಮಾಧಾನ ಹಚ್ಚಿಕೊಂಡಳು.

ಆದರೆ ಮನೆಯಲ್ಲಿ ದುಃಖದ ಕಾರ್ಮೋಡಗಳು ಕವಿದವು. ಸ್ವಲ್ಪೇ ದಿನ ಬೆನೆ ಬಿದ್ದ ವಿನೋದಿನಿಯು, ಚೊಕ್ಕಟವಾದ ಸಂಸಾರ, ಪ್ರೇಮದ ಪತಿ, ವ ಮತೆಯ ಮಗು ಎಲ್ಲವನ್ನೂ ಬಿಟ್ಟು ಹೊರಟುಹೋದಳು. ಮಗು ತಬ್ಬಲಿಯಾಯಿತು. ಇದರಿಂದ ನೃಪೇಶನಿಗೆ ಎದೆಯೊಡೆದಂತಾಗಿ ಒಂದೆರಡು ವಾರ ಜಗತ್ತಿಗೆ ಮುಖವನ್ನೇ ತೋರಿಸುವದಾಗಲಿಲ್ಲ

ಆತನು ಒಂದು ಕೆಲಸದಮೇಲಿದ್ದನು. ನಲ್ಮೆಯ ಇನಿಯಳ ವಿರಹದಿಂದ ಕೆಲವು ದಿವಸ ನೃಪೇಶ ಕೆಲಸಕ್ಕಾಗಿ ಉದಾಸೀನನಾದ; ಅದರಿಂದ ಅವನಿಗೆ ಭಯಂಕರ ಹಾನಿತಟ್ಟಿತು. ಕೆಲವು ದಿನಗಳಲ್ಲಿ ಸಾಲವೂ ಆಯಿತು.

ಮನುಷ್ಯನ ಹೃದಯ ಭಗ್ನವಾಗಿದ್ದರೂ, ಅದರ ಯಾತನೆ ಎಷ್ಟೇ ಇದ್ದರೂ ಅವನು ತನ್ನ ಅನ್ನಕ್ಕಾಗಿ ಹಣಗಳೇ ಬೇಕಾಗುವದು. ಅವನು ಒಬ್ಬನೇ ಆಗಿದ್ದರೆ ಹಾಗೆಯೇ ಕೆಲವು ದಿವಸ ದುಃಖಿಸುತ್ತ ಉಪವಾಸದಿಂದಿರಲು ಬರುತ್ತಿತ್ತು. ಆದರೆ ತನ್ನನ್ನೇ ನಂಬಿ ಮತ್ತೆರಡು ಹೊಟ್ಟೆಗಳು ಕುಳಿತಿದ್ದವು. ಆದ್ದರಿಂದ ನೃಪೇಶನಿಗೆ ಹೆಂಡತಿಗಾಗಿ ಶೋಕಿಸುತ್ತ ಕೂಡಲು ಸಮಯವಿರಲಿಲ್ಲ. ತನ್ನ ಮಗನ ಉಪಜೀವನಕ್ಕಾದರೂ ಅವನು ಕೆಲಸವನ್ನು ಅರಸಲಿಕ್ಕೆ ಹೋಗಬೇಕಾಯಿತು ಕಲಕತ್ತೆಯಲ್ಲಿ ಕೇಳಿದಾಕ್ಷಣ ಕೆಲಸ ಸಿಕ್ಕೇಬಿಡುವದಿಲ್ಲ. ಅವು ಸಿಗುವದು ಎಷ್ಟು ಕಷ್ಟವೆಂಬುದು ಅವಕ್ಕಾಗಿ ಅರಸುವ ಉಮೇದವಾರರಿಗೇ ಗೊತ್ತು. ಅದೃಷ್ಟವೂ ನೃಪೇಶನಿಗೆ ಅನುಕೂಲವಾಗಿರಬೇಕು. ಒಂದು ಕೆಲಸ ಸಿಕ್ಕಿತು. ಅದೇನೂ ಅಷ್ಟು ಚೆನ್ನಾಗಿರಲಿಲ್ಲ. ಆದರೂ ಅವನ ಇಂದಿನ ಸ್ಥಿತಿಗೆ ಅದೇ ಹೊಂದಿಕೆಯಾಗುವಂತಿತ್ತು.

ತನ್ನ ಹಳೆ ಮನೆ ಬಿಟ್ಟು ಊರ ಮಧ್ಯದಲ್ಲಿ ಒಂದು ಹೊಲಸಾದ ಓಣಿಯಲ್ಲಿ ಕತ್ತಲೆಯಿಂದ ತುಂಬಿದ ಒಂದು ಸಣ್ಣ ಮನೆಯನ್ನು ಭಾಡಿಗೆ ಹಿಡಿದ.

ಇನ್ನು ಉಳಿದವರಿಗಾಗಿ ಸಂಕಟಕ್ಕಿಟ್ಟುಕೊಂಡಿತು. ಈಗ ಇಬ್ಬರನ್ನೂ ಇಟ್ಟುಕೊಳ್ಳುವದಕ್ಕೆ ಸಾಧ್ಯವಿಲ್ಲ ಸದ್ಯದ ಸಂಬಳದ ಹಣವು ಇಬ್ಬರಿಗೂ ಕೊಡುವದಕ್ಕೆ ಸಾಕಾಗುತ್ತಿರಲಿಲ್ಲ. ಹೆಂಡತಿ ಬದುಕಿದ್ದಾಗಲೇ ಇಬ್ಬರು ಆಳುಗಳ ಅವಶ್ಯಕತೆಯಿತ್ತು. ಆದ್ದರಿಂದ ಈಗ ಅವರಲ್ಲಿ ಒಬ್ಬರನ್ನು ಕಡಿಮೆ ಮಾಡಲೂ ಬರುವಂತಿಲ್ಲ. ಆದರೂ ಆರ್ಥಿಕ ಪರಿಸ್ಥಿತಿಯ ಕಡೆಗೂ ಸ್ವಲ್ಪ ಲಕ್ಷಕೊಡಬೇಕಾಗುವದು.

ನೃಪೇಶನು ಅವರಲ್ಲಿ ಅಡಿಗೆಯವನಾದ ಹರನಾಥನನ್ನು ಬಿಡಲು ನಿಶ್ಚಯಿಸಿದ. ಆಯಳೇ ಅಡಿಗೆ ಮಾಡಿಕೊಂಡು ಹೋಗುತ್ತಳು. ಮೊದಮೊದಲು ಆಕೆ ಚೆನ್ನಾಗಿ ಮಾಡಲಾರಳು ಕೆಲವು ದಿನ ಸೈರಿಸಬೇಕೆಂದು ನೃಪೇಶ ನಿಶ್ಚಯಿಸಿದ. ಆಯಳನ್ನೇ ಬಿಟ್ಟುಬಿಡಲು ಅವನಿಗೆ ಒಮ್ಮೆಯೂ ವಿಚಾರಹೊಳೆಯಲಿಲ್ಲ. ಆಕೆ ಎಷ್ಟೆಂದರೂ ಹೆಂಗಸು. ತನ್ನ ಮನೆ ಆಪ್ತೇಷ್ಟರನ್ನೂ ಬಿಟ್ಟು ಇಷ್ಟು ದೂರದವರೆಗೆ ಬಂದಿದ್ದಾಳೆ. ಆಯಳನ್ನಿಷ್ಟು ಅಗಲಿಸಿ ಬಿಟ್ಟರೆ ತೀರಿಯೇ ಹೋಯಿತು ಮಗುವಿನ ಗತಿ. ಆದ್ದರಿಂದ ಹರನಾಥನನ್ನೇ ಬಿಡಬೇಕಾಯಿತು. ನೃಪೇಶ ಅವನಿಗಾಗಿ ಗೆಳೆಯರ ಮನೆಯಲ್ಲಿ ವ್ಯವಸ್ಥೆ ಮಾಡಿ ಅಲ್ಲಿಗೆ ಕಳಿಸಿದ. ಖೋಕಾನನ್ನು ಬಗಲಿನಲ್ಲಿಟ್ಟುಕೊಂಡು ಆಯ ಅಡಿಗೆ ಮಾಡಲು ಮೊದಲು ಮಾಡಿದಳು. ಆಯ ಮಾಡಿದ ಅಡಿಗೆಗೆ ಹುಣಿಸೆ ಹುಳಿ ಮತ್ತು ಮೆಣಸಿನ ಖಾರ ಕ್ರಮದಪ್ಪಿ ಬಿದ್ದಿದ್ದವು. ನೃಪೇಶನಿಗೆ ಮುಂಜಾನೆ ಊಟಕ್ಕೆ ಬಡಿಸಿದಳು ಮೊದಲನೆಯ ತುತ್ತಿಗೇ ನೃಪೇಶ ಪೂರಾ ಇಳಿಗುಬಿಟ್ಟ. ಆಯಳ ಮನಸ್ಸನ್ನು ನೋಯಿಸಬಾರದೆಂದು ಅದನ್ನೇ ಗಟ್ಟಿಮನಸ್ಸು ಮಾಡಿ ತಿಂದು ಮುಗಿಸಿದನು. ಆಕೆಗೂ ಬುದ್ಧಿ ಕಡಿಮೆಯಾಗಿರಲಿಲ್ಲ, ಊಹಿಸಿದಳು. ಆಕೆಯ ಕಂಗಳಿಂದ ನೀರು ಧಾರೆಯಾಗಿ ಸುರಿಯಿತು.

ಮರುದಿವಸ ನೃಪೇಶ ಹರನಾಥನನ್ನು ಮರಳಿ ಕರೆತರಲು ಹೋಗಿ ಕರೆದುಕೊಂಡೇ ಬಂದ. ಈ ಸಲ ಆಯ ತಾನೇ ಸ್ವಂತಃ ಬಿಡಲು ನಿಶ್ಚಯಿಸಿದಳು. ಬಾಬುಗಳು ಇಬ್ಬರು ಸೇವಕರಿಗೆ ಕೂಲಿ ಪೂರೈಸುವದಕ್ಕೆ ಸಮರ್ಥರಾಗಿಲ್ಲವೆಂದು ಆಕೆಗೆ ಪೂರಾ ಗೊತ್ತು. ತನ್ನೊಬ್ಬಳಿಗೇ ಕೆಲಸ ಸಾಗಿಸಿಕೊಂಡು ಹೋಗುವದೂ ಸಾಧ್ಯವಿಲ್ಲ. ಅಂತೆಯೇ ಕೆಲಸಬಿಟ್ಟು

ಹೋದಳು. ಶೋಕಾನನ್ನು ನಡುನೀರಿನಲ್ಲಿ ಕೈಬಿಟ್ಟು ಹೊರಟಳು. ಆಕೆ ಹೋಗುವಾಗ ಎಲ್ಲಿಗೆ ಹೋಗುವಿ ಎಂದು ನೃಪೇಶ ಕೇಳಿದ ಆಕೆ, ಮಗ್ಗುಲಲ್ಲಿ ಪರಿಚಯದವನೊಬ್ಬನಿದ್ದಾನೆ, ಸದ್ಯ ಅಲ್ಲಿಗೆ ಹೋಗುವದಾಗಿಯೂ, ನಂತರ ಇನ್ನೊಂದು ಕೆಲಸ ಹುಡುಕುವದಾಗಿಯೂ ತಿಳಿಸಿದಳು.

ನೃಪೇಶನಿಗೆ ಸಂಕಟಕ್ಕಿಟ್ಟುಕೊಂಡಿತು. ಶೋಕಾ ಅವನನ್ನು ಬಿಡುತ್ತಿರಲೇ ಇಲ್ಲ. ಊಟಮಾಡುವದಕ್ಕೂ, ಸ್ನಾನಮಾಡುವದಕ್ಕೂ, ಮಲಗಲಿಕ್ಕೂ ಸಮಯ ಸಿಕ್ಕುವಂತಿರಲಿಲ್ಲ. ಈ ಮೂರು ಕೆಲಸಗಳನ್ನು ಬಿಟ್ಟರೂ ಬಿಡಬಹುದಾಗಿತ್ತು. ಆದರೆ ಕೆಲಸಕ್ಕೆ ಹೋಗುವದಕ್ಕೆ ಬಿಡುವದು ಸಾಧ್ಯವಿರಲಿಲ್ಲ.

ಅಂದು ಆಹಾರವೇನೋ ಚೆನ್ನಾಗಿತ್ತು; ಹರನಾಥನಿಗೆ ಮನಸ್ಸಿನಲ್ಲಿಯೇ ಅಭಿವಂದನೆಗಳನ್ನರ್ಪಿಸುತ್ತ ಊಟಮಾಡಿ ಶೋಕಾನನ್ನು ಹರನಾಥನಿಗೆ ಒಪ್ಪಿಸಿ ಹನ್ನೆರಡು ಘಂಟೆಗೆ ನೃಪೇಶ ಕಚೇರಿಗೆ ಹೋದ ನೃಪೇಶ ಬರುವವರೆಗೆ ಹರನಾಥ ಅಳುತ್ತಿರುವ ಶೋಕಾನನ್ನು ಹೊತ್ತು ಬೀದಿ ಬೀದಿ ತಿರುಗಿ ಬಂದು ಆತನನ್ನು ನೃಪೇಶನಿಗೆ ಒಪ್ಪಿಸಿ ಸಂಜೆಯ ಅಡಿಗೆಮಾಡಿ ಇಬ್ಬರಿಗೂ ಊಟಕ್ಕೆ ಹಾಕಿದ, ಪಾಪ! ಶೋಕಾ ಇಡೀಯ ದಿನ ಅತ್ತು ಅತ್ತು ಬೇಸತ್ತಿರಬೇಕು, ದಣಿವೂ ಆಗಿದ್ದಿರಬೇಕು; ನೃಪೇಶ ಹಾಸಿಗೆಯ ಮೇಲೆ ಹಾಕಿ ಒಂದು ಕ್ಷಣ ತಟ್ಟುತ್ತಿರುವದರಲ್ಲಿಯೇ ಮಲಗಿ ನಿದ್ರೆಹೋದ. ಇಂದು ರಾತ್ರಿ ಚೆನ್ನಾಗಿ ತಾನೂ ನಿದ್ರೆಮಾಡಬಹುದೆಂದು ನೃಪೇಶನೂ ಮಗ್ಗುಲಲ್ಲಿಯೇ ಮಲಗಿದ.

ಆದರೆ ನೃಪೇಶ ತರ್ಕಿಸಿದಂತೆ ಶೋಕಾ ಇಡೀಯ ಇರಳು ಮಲಗಲಿಲ್ಲ. ನಡುರಾತ್ರಿಗೆ ಸಮನಾಗಿ ಎಚ್ಚರಿಕೆಕೊಡುವ ಗಡಿಯಾರದಂತೆ ಕಿರುಚಲಿಕ್ಕೆ ಮೊದಲುಮಾಡಿದ. ನೃಪೇಶ ಎಚ್ಚತ್ತು ಆತನನ್ನು ಹರನಾಥನ ಕೈಗಾದರೂ ಕೊಟ್ಟರಾಯಿತೆಂದು ಹರನಾಥನನ್ನು ಎಷ್ಟುಸಲ ಕೂಗಿ ಎಬ್ಬಿಸಿದರೂ ಅವನು ಏಳಲಿಲ್ಲ ಅಷ್ಟೊಂದು ಗಾಢನಿದ್ರೆ ಅವನನ್ನು ಆವರಿಸಿತ್ತು. ನೃಪೇಶನೇ ಶೋಕಾನನ್ನು ಎತ್ತಿಕೊಂಡು ಅತ್ತಿಂದಿತ್ತ ತಿರುಗಾಡಿದ. ಆದರೂ ಆತನ ದುಃಖಶಮನವಾಗಲಿಲ್ಲ. ನಡುನಡುವೆ ಬಿಕ್ಕಿಸುತ್ತಿದ್ದ. ಸತ್ತ ತಾಯಿಯ ನೆನಪು ಆಗುತ್ತಿರಬೇಕು; ಪಾಪ ತಾಯಿಸತ್ತ ಮಗು! ಇವನು ಇನ್ನೂ ಕೆಲ

ದಿವಸ ಹೀಗೆ ಸಾಗಿದ್ದಾದರೆ ತಂದೆಯನ್ನೂ ಕಳೆದುಕೊಳ್ಳುವನು, ಆಯಳು ಇದ್ದಳು. ಏನೋ ಮಾಡಿ ಆತನನ್ನು ರಮಿಸುತ್ತಿದ್ದಳು. ಈಗ ಆಕೆ ಹೋಗಿದ್ದಾಳೆ. ತಬ್ಬಲಿ ಕಂದನನ್ನು ಗೋಳಿಡಲು ಬಿಟ್ಟು ಹೋಗಿದ್ದಾಳೆ. ಯಾರೂ ಆಕೆಗೆ ಹೋಗಲು ಹೇಳಿರಲಿಲ್ಲ.

ಮರುದಿನ ನೃಪೇಶ ಕಚೇರಿಯಲ್ಲಿ ಹಲವು ಗೆಳೆಯರಿಗೆ ತನ್ನ ಸಂಕಟವನ್ನು ತೋಡಿಕೊಂಡ. ನೃಪೇಶನ ದೇಹವು ಕಚೇರಿಯಲ್ಲಿರುತ್ತಿದ್ದರೆ ಮನೆಯಲ್ಲಿ ಮನವು ಇರುತ್ತಿತ್ತು. ಯಾವಾಗಲೂ 'ಶೋಕಾ ಏನುಮಾಡುತ್ತಿದ್ದಾನು.' ಎಂದು ತರ್ಕಿಸುತ್ತಿದ್ದ. ಹರನಾಥನ ವಿಷಯಕ್ಕೆ ಅವನಿಗೆ ಸಾಕಷ್ಟು ವಿಶ್ವಾಸವಿರಲಿಲ್ಲ ಅವನಿಗೆ ಗೊತ್ತು ಆವನೆಂದೂ ಶೋಕಾನಿಗಾಗಿ ಸರಿಯಾದ ಉಪಚಾರ ಮಾಡನೆಂದು.

"ಹೀಗೆಯೇ ಎಷ್ಟು ದಿವಸ ನಡೆದೀತು ? ಬೆಳೆದ ಹೆಣ್ಣೊಂದನ್ನು ಮದುವೆಯಾಗು. ಆಕೆ ನಿನ್ನ ಮತ್ತು ಮಗುವಿನ ಉಪಚಾರ ನೋಡಿಕೊಂಡು ಹೋಗುವಳು. ಆಳುಗಳಿಂದೂ ಮಕ್ಕಳನ್ನು ಸರಿಯಾದ ರೀತಿಯಲ್ಲಿ ಜೋಪಾನ ಮಾಡಲಾರರೆ"ಂದು ಅವನ ಗೆಳೆಯರು ಸಲಹೆಗಳನ್ನಿತ್ತರು. ನೃಪೇಶನಿಗೆ ಅತಿ ವೇದನೆಯಾಯಿತು, ಅವರ ನುಡಿಗಳಿಗೂ ಪ್ರತಿನುಡಿಗಳನ್ನಾಡದೆ ಮನೆಗೆ ಬಂದುಬಿಟ್ಟ.

ನೃಪೇಶ ಇನ್ನೂ ಹೊಸ್ತಿಲೊಳಗೆ ಕಾಲಿಟ್ಟಿರಲಿಲ್ಲ. ಹರನಾಥ ಆಗಲೇ ಶೋಕಾನ ಹಟಮಾರಿತನವನ್ನು ಬಣ್ಣಿಸಿಹೇಳಿ, ಅವನು ತನಗೂ ಕೊಟ್ಟ ಕಷ್ಟಗಳನ್ನು ತೋಡಿಕೊಂಡ. ನೃಪೇಶನಿಗೆ ಹೇಗೆ ಶೋಕಾನನ್ನು ಸಂತೈಸಬೇಕೆಂಬುದು ತಿಳಿಯದೆ ಹೋಯಿತು. ತಾನು ಅಂದು ಊಟ ಮಾಡುವದಿಲ್ಲವೆಂದು ಹೇಳಿ ಕೋಣೆಯಲ್ಲಿ ಹೋಗಿ ವಿಚಾರಿಸಹತ್ತಿದ. ಅಲ್ಲಿಗೂ ಶೋಕಾನ ದಬ್ಬಾಳಿಕೆಯೂ ಕೇಳಿಸುತ್ತಲೇ ಇತ್ತು, ಮರಳಿ ಒಳಗೆ ಅಡಿಗೆ ಮನೆಯಲ್ಲಿ ಹೋದಾಗ ಶೋಕಾ ತಾಟುಗಳನ್ನೂ, ಕಾಜಿನ ಬಟ್ಟಿಗಳನ್ನೂ ಒಡೆಯುವದೂ, ಹರನಾಥನನ್ನೂ ಕಡಿಯುವದೂ, ಅವನ ಕೂದಲುಗಳನ್ನು ಜಗ್ಗುವದೂ ಮೊದಲಾದ ನರಕ ಶಿಕ್ಷೆಗಳನ್ನು ಹರನಾಥನಿಗೆ ಕೊಡುವದನ್ನು ಕಂಡಾರೆ ಕಂಡ.

ಹರನಾಥನಿಗೆ ಶೋಕಾನನ್ನು ಮಲಗಿಸೆಂದು ಹೇಳಿ, ನೃಪೇಶನೇ ಸ್ವತಃ ತಾನೇ ಅಡಿಗೆ ಮಾಡಲು ಕುಳಿತ.

ಹರನಾಥ ಖೋಕಾನನ್ನು ಕಟ್ಟಿಕೊಂಡು ಬೋರ್ರೊಂದು ಕೋಣೆಗೆ ಹೋಗಿ, ಅಲ್ಲಿ ಅವನೊಡನೆ ತಾನೂ ಕುಣಿದು, ಚೀರಾಡಿ ಆಟವಾಡಿದ. ಕೊನೆಗೊಮ್ಮೆ ಖೋಕಾ ಮಲಗಿ ನಿದ್ರೆಹೋದ. ನೃಪೇಶ ಆಗ ಗಡಿಯಾರ ತೆಗೆದು ನೋಡಿದನು. ಆಗಲೇ ಒಂಬತ್ತೂವರೆಯ ಮೇಲೆ ಆಗಿತ್ತು; ಅಂದು ಮುಂಜಾನೆಯಿಂದ ಸಂಜೆಯುವರೆಗೆ ನಡೆದ ಕೆಲವು ಸಂಗತಿಗಳಿಂದ ನೃಪೇಶನಿಗೆ ಅತಿ ದಣವಾದಂತಾಗಿತ್ತು. ನಿತ್ಯದಂತೆ ಹನ್ನೆರಡು, ಒಂದು ಘಂಟೆಗಳವರೆಗೆ ಕೂಡಲು ಆಗಲಿಲ್ಲ. ಹೋಗಿ ಖೋಕಾನ ಸಮೀಪದಲ್ಲಿ ಮಲಗಿದ; ಖೋಕಾ ಗಾಢ ನಿದ್ರೆಯಲ್ಲಿದ್ದ. ಈ ದಿನವಾದರೂ ಸ್ವಲ್ಪ ನಿದ್ದೆ ಸಿಕ್ಕಲಿ ಅರವೇ ಎಂದು ನೃಪೇಶ ಇಚ್ಛಿಸುತ್ತ ಮಲಗಿದ.

ಬೆಳಗಿನಲ್ಲಿ ನೃಪೇಶ ಎದ್ದಾಗ ಸೂರ್ಯನು ಆಗಲೇ ಮೂಡಣ ದಿಕ್ಕಿನಲ್ಲಿ ಎರಡಾಳೆತ್ತರ ಏರಿಬಂದಿದ್ದನು. ತನ್ನ ಗಡಿಯಾರದ ಕಡೆಗೆ ನೋಡಿದಾಗ ನೃಪೇಶನಿಗೆ ಆಶ್ಚರ್ಯವಾಯಿತು. ಆಗಲೇ ಒಂಬತ್ತಕ್ಕೆ ಹದಿನೈದು ನಿಮಿಷಗಳಿದ್ದವು. ಮಗ್ಗುಲಲ್ಲಿ ಕಣ್ಣು ಹೊರಳಾಡಿಸಿದ, ಖೋಕಾ ಅಲ್ಲಿ ಮಲಗಿರಲಿಲ್ಲ. ಹರನಾಥನನ್ನು ಕೂಗಿ 'ಖೋಕಾ ಎಲ್ಲಿರುವನೆ'ಂದು ಕೇಳಿದ.

ಹರನಾಥ ಬಂದನು. ಅವನ ಮುಖವು ಆಷಾಢಮಾಸದಲ್ಲಿಯ ಮುಗಿಲು ತುಂಬಿದ ಬಾನಿನಂತೆ ತೋರುತ್ತಿತ್ತು. ಹಾಗೆಯೇ ಮುಖ ಸಣ್ಣದು ಮಾಡಿ "ಅವನು ತನ್ನ 'ಅಮ್ಮ'ನೊಂದಿಗೆ ತಿರುಗಾಡಲು ಹೋಗಿದ್ದಾನೆ" ಎಂದು ಹೇಳಿದನು. ನೃಪೇಶನಿಗೆ ನಂಬಿಗೆಯಾಗಲಿಲ್ಲ. "ಅಮ್ಮನೊಂದಿಗ" ಎಂದು ಅವನು ಕೇಳಿದ್ದರೂ ತನ್ನ ಕಿವಿಗಳನ್ನೇ ನಂಬದಾದ. ಪುನಃ ಕೇಳಿದ.

"ಆಕೆ ಯಾವಾಗ ಬಂದಳು?"

"ಆಕೆ ನಿನ್ನೆ ಬೈಗಿನಲ್ಲಿ ತಿರುಗಿ ಬಂದಳು. ಆ ಸಣ್ಣ ಕೋಣೆಯಲ್ಲಿ ಅಡಗಿ ಕುಳಿತಿದ್ದಳು. ಆಗ ನಾನು ಆಕೆಯನ್ನು ಕಂಡಿರಲಿಲ್ಲ. ರಾತ್ರಿ ಖೋಕಾ ಎದ್ದು, ಅಳುತ್ತಿರುವಾಗ ಆಕೆ ಅಲ್ಲಿಂದ ಹೊರಗೆ ಬಂದಳು. ಬೆಳಗಿನಲ್ಲಿ ಐದು ಘಂಟೆಯುವರೆಗೂ ಆತನನ್ನು ಎತ್ತಿಕೊಂಡು ತಿರುಗಾಡಿದಳು. ಇದೇ ಈಗ ಇನ್ನೂ ಅರ್ಧತಾಸಿನ ಕೆಳಗೆ ಆಕೆ ಎದ್ದಳು. ಹಾಗೆಯೇ ಖೋಕಾನನ್ನು ಎತ್ತಿಕೊಂಡು ಮತ್ತೆ ತಿರುಗಾಡಲಿಕ್ಕೆ ಹೋದಳು." ಹರನಾಥ ಹೇಳಿ ಮುಗಿಸಿದ.

ನೃಪೇಶನಿಗೆ ಭಾರವಾದುದೊಂದು ಮೊಟ್ಟೆಯನ್ನು ಆತನ ಮನಸ್ಸಿನಿಂದ ಇಳಿಸಿದಂತಾಯಿತು. ಒಂದು ವೇಳೆ ಊಟಮಾಡುವದಕ್ಕಾದರೂ ಬಿಡಬಹುದು; ಆದರೆ ಹಗಲುರಾತ್ರಿ ಮಮತೆಯ ಮಗನ ರಂಭಾಟವನ್ನು ಸಹಿಸುವದಕ್ಕಾಗುವದಿಲ್ಲ. ಮೇಲಾಗಿ ಮಗುವೂ ಎಷ್ಟೋ ಸೊರಗಿದಂತಾಗಿತ್ತು. ಮಗನ ಸಂಬಂಧವಾಗಿ ಬರುವ ಖರ್ಚನ್ನೆಲ್ಲ ಹೊರಲು ಆತನ ಆರ್ಥಿಕ ಪರಿಸ್ಥಿತಿ ಅಷ್ಟೇನೂ ಇನ್ನೂ ಸುಧಾರಿಸಿಲ್ಲ. ಇನ್ನು ಸ್ವಲ್ಪ ಹೆಚ್ಚನ್ನಾದರೂ ಗಳಿಸಬೇಕು ಇಲ್ಲವೆ ಬೇರೆ ಖರ್ಚುಮಾಡುವದನ್ನು ಕಡಿಮೆ ಮಾಡಬೇಕೆಂದು ನಿಶ್ಚಯಿಸಿದ. ಹರನಾಥ ಇನ್ನೂ ಅಲ್ಲಿಯೇ ನಿಂತಿದ್ದ. ನೃಪೇಶನ ಮನಸ್ಸಿನ ಹೊಯ್ದಾಟವು ಅವನಿಗೂ ಅರ್ಥವಾಗಿರಬೇಕು. ಅಂತೆಯೇ ಗುಯ್ಗುಟ್ಟಿದನು.

"ಒಡೆಯರೆ, ಇನ್ನು ನನ್ನನ್ನು ತಗೆದುಹಾಕಿರಿ"

"ಆ ಮೇಲೆ ಯಾರು ಅಡಿಗೆ ಮಾಡಬೇಕು?" ನೃಪೇಶ ಕೇಳಿದ

"ಅಂದ ಮೇಲೆ ಆಯ ಹೋಗಬೇಕೆ!"

"ಹುಡುಗನ್ನಾರು ನೋಡುವರು!"

"ಇಬ್ಬರು ಊಳಿಗದವರನ್ನು ಇಡುವದು ಸಾಧ್ಯವಿಲ್ಲವೆಂದು ನೀವೆ ಅಂದಿದ್ದಿರಿ" ಹರನಾಥ ಸ್ವಲ್ಪ ಚಕಿತನಾಗಿಯೇ ಕೇಳಿದ

"ಅಧಿಕಪ್ರಸಂಗತನ ಸಾಕು. ಹೋಗು ಅಡಿಗೆಮಾಡು ಹೊತ್ತಾಗಿದೆ" ಹರನಾಥ ಜೋಲುಮೋರೆ ಹಾಕಿಕೊಂಡು ಹೋದನು.

ಆಯಾಳು ಮಗುವನ್ನು ಕರೆದುಕೊಂಡು ಬಂದಳು. ನೃಪೇಶನಿಗೆ ವಂದನೆಯನ್ನರ್ಪಿಸಿ ಮೌನವಾಗಿ ಒಳಗೆ ನಡೆದಳು. ನೃಪೇಶ ಆಕೆಯನ್ನು ಕರೆದನು. ತನ್ನ ಸಂಬಳದ ಬಗ್ಗೆ ಮಾತು ನಡೆಯುವದೆಂದು ಆಕೆಗೆ ತಿಳಿಯಿತು. ನೃಪೇಶನು ಮಾತನಾಡುವ ಮೊದಲೇ ತಾನೇ ಎಲ್ಲ ಹೇಳಿದಳು. ಮಗುವನ್ನು ಬಿಟ್ಟು ತಾನು ಇರುವದು ಸಾಧ್ಯವಿಲ್ಲೆಂದೂ, ಆತನಿಗಾಗಿಯೇ ನಾಡು, ಮತ್ತು ನೆಂಟರನ್ನು ಬಿಟ್ಟು ಬಂದಿರುವದಾಗಿಯೂ ತಿಳಿಸಿದಳು. ಮಗುವನ್ನು ಬಿಟ್ಟುಹೋಗುವದಾದರೂ ಹೇಗೆ ಸಾಧ್ಯ? ಆಕೆಗೂ ಗೊತ್ತು ಒಡೆಯರು ಆಕೆಗೆ ಸಂಬಳ ಕೊಡುವ ಸ್ಥಿತಿಯಲ್ಲಿ ಸದ್ಯಕ್ಕೆ ಇಲ್ಲವೆಂಬುದು. ಆಕೆಗೆ ಸಂಬಳ ಬೇಕಾಗಿರಲಿಲ್ಲ. ಹೊಟ್ಟೆಬಟ್ಟೆಗೆ ಇಷ್ಟುಕೊಟ್ಟು, ಇರಲಿಕ್ಕೆ ಒಂದು ಗೇಣು ನೆಲವನ್ನು ಕೊಟ್ಟರೆ ಸಾಕೆಂದು ಆಕೆ ನಿಶ್ಚಯಿಸಿ

ದಳು. ಬೇಕಾದರೆ ಅವರ ಎಲ್ಲ ಲಿಸ್ಕ ಸನ್ನಿಟ್ಟು, ಖೋಕಾ ದೊಡ್ಡವನಾದ ಮೇಲೆ ತಕ್ಕೊಳ್ಳಲು ಬಂದೀತು. ತಾಯಿಯು ಖೋಕಾನನ್ನು ಆಕೆಯು ಲಾಲನೆ-ಪಾಲನೆಗಳಲ್ಲಿ ಬಿಟ್ಟಿದ್ದಾಳೆ. ಅಂತೆಯೇ ಆಕೆ ಅಲ್ಲಿಯೇ ಇರಲು ನಿಶ್ಚಯಿಸಿದಳು.

ಕೆಲವು ದಿವಸಗಳ ವರೆಗೆ ಎಲ್ಲವೂ ಸರಿಯಾಗಿ ಸಾಗಿತು ನೃಪೇಶನಿಗೂ ಎಷ್ಟೋ ಹರ್ಷವಾಯಿತು; ಆದರೆ ಕ್ರಮೇಣ ಅಡಿಗೆಯವನಿಗೂ ಆಯಳಿಗೂ ವೈಮನಸ್ಸುಂಟಾಯಿತು; ನಿತ್ಯ ಯಾರಾದರೊಬ್ಬರು ನೃಪೇಶನ ಮುಂದೆ ತಕರಾರು ತರುತ್ತಲೇ ಇದ್ದರು, ನೃಪೇಶ ಮೊದಮೊದಲು ಅವರ ಮಾತಿನ ಕಡೆಗೆ ಅಷ್ಟೊಂದು ಲಕ್ಷವಿತ್ತಿರಲಿಲ್ಲ ಆದರೆ ಈತ ಮೊದಲಿನಂತೆ ಉದಾಸೀನನಾಗಲು ಬರುವಂತಿರಲಿಲ್ಲ; ಅದರೆ ಈಗ ಮೊದಲಿನಂತೆ ಉದಾಸೀನನಾಗಲು ಬರುವಂತಿರಲಿಲ್ಲ; ಅವರ ಕದನ ವಿಕೋಪಕ್ಕೆ ಮುಟ್ಟಿತ್ತು. ಹರನಾಥ ಮುದುಕ ಉಳಿಗದವ; ಆಯಾಳಂನೂ ತನಗಾಗಿ ಇಷ್ಟು ತ್ಯಾಗಮಾಡಿದ್ದಾಳೆ. ಯಾರ ಪಕ್ಷ ವಹಿಸಬೇಕೆಂಬುದು ಆತನಿಗೆ ತಿಳಿಯದೆ ಹೋಯಿತು, ಮತ್ತು ಏನೇನೊ ನೆವಗಳನ್ನು ಮುಂದೆ ಮಾಡಿ ಕಲಿವಿನ ದೂಕಿದ, ಆದರೆ ಪರಿಣಾಮ ಭೀಕರವಾಗುತ್ತ ಬಂತು, ಇಬ್ಬರೂ ತಳಮಳಿಸುವ ಲಾವಾರಸದಂತೆ ಒಳಗೊಳಗೆ ಕುದಿದರು; ಕಡು ವೈರಿಗಳಾದರು, ಸಮಯಬಂದರೆ ಹರನಾಥನ ಕುತ್ತಿಗೆಗೆ ಆಯಳು ಕೈಹಾಕುವದಕ್ಕೂ ಆಯಳ ಕುತ್ತಿಗೆಗೆ ಹರನಾಥ ಕೈಹಾಕುವದಕ್ಕೂ ಸಿದ್ಧರಾಗಿದ್ದರು

ಇಷ್ಟರಿಂದಲೇ ನೃಪೇಶನು ನುಗ್ಗಾಗಿ ಹೋಗಿದ್ದ. ತೀವ್ರದಲ್ಲಿಯೇ ಇನ್ನೊಂದು ಸಂಕೋಚ ಬಂದೊದಗಿತು. ಅವನ ಮಗ್ಗುಲಮನೆಯಲ್ಲಿ ಒಬ್ಬ ಅಕ್ಕಸಾಲಿಗನಿದ್ದ; ಕೆಲಸವೂ ಚೆನ್ನಾಗಿ ಸಾಗುತ್ತಿತು. ಮೇಲಾಗಿ ತಲೆಮಾರುಗಳಿಂದ ಬಂದ ಭಂಗಾರದ ಚೋರಿಗಾಗಿಯೂ ಪ್ರಸಿದ್ಧನಾಗದೆ ಇರಲಿಲ್ಲ. ಅಕ್ಕಸಾಲಿಗ ಅಕ್ಕನ ಭಂಗಾರವನ್ನು ಬಿಟ್ಟಿಲ್ಲವಂತೆ, ಇನ್ನು ಪರರದನ್ನು ಬಟ್ಟಾನೆಯೇ ? ಸ್ವಲ್ಪ ಸ್ಥಿತಿವಂತನಂತೆ ಕಾಣುತ್ತಿದ್ದ. ಬಂದು ದಿನ ಬೆಡಗಿನ ಬೆಳಗಿನಲ್ಲಿ ಆವನ ಒಬ್ಬ ಹುಡುಗ ಮೂರುಗಾಲಿಯ !ಸಾಯಕಲ್ಲಹತ್ತಿ ಬೀದಿಯಲ್ಲಿ ಕೇಕೆಹಾಕಿ ತಿರುಗುತ್ತಿದ್ದುದನ್ನು ಖೋಕಾ ನೋಡಿದನು. ಇನ್ನೂ ಆ ಹುಡುಗನ ಕಾಲುಗಳು ಪೆಡ್ಲಿಗೆ ನಿಲುಕುತ್ತಿರಲಿಲ್ಲ; ಅದ್ದರಿಂದ ಆಳೊಬ್ಬನು ಅವನನ್ನು ಅದರ ಮೇಲೆ ಕೂಡಿಸಿ ಎಳೆಯುತ್ತಿದ್ದನು. ಸರಿ ಖೋಕಾ ಈ

ದೃಶ್ಯ ಕಂಡವನೇ ಆಯಳ ಬಗಲಿನಿಂದ ಜಿಗಿದು ಆ ಕಡೆಗೆ ಧಾವಿಸಿದನು. ಆಯಳು ಅವನನ್ನು ತಡೆದು, ಎಲ್ಲಿಗೆ ಹೋಗುವಿ? ಎಂದು ಕೇಳಿದಳು.

ಖೋಕಾ ತನಗೂ ಒಂದು ಅಂಥ ಸಾಯಕಲ್ಲ ಬೇಕೆಂದು ಹಟಮಾಡಿದನು; ಅಕ್ಕಸಾಲಿಗರ ಹುಡುಗನನ್ನು ಆಡಿಸುವ ಓಡಿಸಾದ ಆಳು ಖೋಕಾ ಹಟಮಾಡಿದ್ದನ್ನು ಕಂಡು ಬೀದಿಯಲ್ಲೆಲ್ಲ, ಹುಡುಗನಿಗೆ ಒಂದು ಸಾಯಕಲ್ಲ ತಂದುಕೊಡಲಾರದೆಂದು ಸುದ್ದಿ ಹಬ್ಬಿಸಿದ. ಆಯಳಿಗೆ ಇದೂ ಒಂದು ಬಗೆಯ ಅಪಮಾನವೇ ಆಯಿತು, ತನ್ನ ಬಡತನಕ್ಕಾಗಿ ತನಗೆ ನಾಚಿಕೆಯಾಯಿತು. ಇತ್ತ ಖೋಖಾನ ರಂಭಾಟ ಮೇರೆ ಮೀರಿತ್ತು ಎಷ್ಟೇ ಪರಿಯಾಗಿ ಸವಿ ಸವಿ ಮಾತಿನಲ್ಲಿ ನುಡಿಸಿದರೂ ಖೋಕಾ ಸಮಾಧಾನ ಹೊಂದಲಿಲ್ಲ; ಅಳುತ್ತಲೇ ಇದ್ದ, ಆಯಾ ಅವನನ್ನು ಮನೆಗೆ ಕರೆದುತಂದಳು ಹರನಾಥ ಅಡಿಗೆಮನೆಯ ಕಿಡಕಿಯೊಳಗಿಂದ ತಲೆ ಹೊರಗೆ ಹಾಕಿ ಕಾರಣ ಕೇಳಿದ, ಖೋಕಾ ಹಟಮಾಡಿದುದಕ್ಕೆ. ಆಯಾ ಅವನಿಗೆ ಓಡಿಸಾ ಆಳಿನ ಈ ಅಧಿಕ ಪ್ರಸಂಗಿತನವನ್ನು ಬಣ್ಣಿಸಿ, ಚೆನ್ನಾಗಿ ಜೈಯ್ದಳು; ಖೋಕಾನ ಅಳುವು ಮಾತ್ರ ಕ್ಷಣಕ್ಷಣಕ್ಕೆ ಹೆಚ್ಚುತ್ತಲೇ ಇತ್ತು. ನೃಪೇಶ ಬೆಳಗಿನ ತಿರುಗಾಡುವದನ್ನು ಮುಗಿಸಿಕೊಂಡು ಬಂದು, ಹರನಾಥನಿಗೆ ತೀವ್ರ ಊಟಕ್ಕೆ ಬಡಿಸೆಂದೂ ಇಲ್ಲವಾದರೆ ಕಚೇರಿಗೆ ತಡವಾಗುವದೆಂದೂ ಹೇಳಿದ. ಖೋಕಾ ನೃಪೇಶನ ಬಳಿಗೆ ಓಡಿಹೋಗಿ ಅವನ ಕೋಟಿನ ತುದಿಯನ್ನು ಹಿಡಿದು ಜಗ್ಗಲಿಕ್ಕೆ ಹತ್ತಿದನು, ನೃಪೇಶನು ಮುದ್ದುಮಗನ ಉಂಗುರು ಕೂದಲುಗಳ ಮೇಲೆ ನೇವಾಸುತ್ತ "ಖೋಕಾ, ಏನು ಬೇಕಪ್ಪಾ? ಎಂದು ಕೇಳಿದ.

"ಅಪ್ಪಾ, ನನಗೊಂದು ಮೂರುಗಾಲಿ ಸಾಯಕಲ್ಲ ಕೊಂಡುಕೊಡು."

ನೃಪೇಶನೆಂದೂ ಯಾರು ಏನನ್ನೇ ಕೇಳಿದರೂ ಇಲ್ಲವೆಂದಿರಲಿಲ್ಲ, ಆದರೆ ಇಂದು ಏನುಮಾಡಬೇಕೆಂಬುದು ಆತನಿಗೆ ತಿಳಿಯಲೊಲ್ಲದು ಒಂದು ಕ್ಷಣ ವಿಚಾರಮಾಡಿ, ಯಾವ ನಿರ್ಣಯಕ್ಕೂ ಬಾರದೆ ಒಮ್ಮೆಲೇ ಉತ್ತರ ಕೊಟ್ಟ.

"ಆಗಲಪ್ಪ, ಕೊಂಡು ಕೊಡುವೆ, ಆದರೆ ಈಗ ಕಚೇರಿಗೆ ಹೋಗುವೆ; ಇಲ್ಲದಿದ್ದರೆ ಸಾಹೇಬರು ಹೊಡೆಯುವರು"

ಆದರೆ ಖೋಕಾನು ಟ್ರೈಸಿಕಲ್ಲಿಗಾಗಿ ಅತಿ ಆತುರನಾಗಿದ್ದ, ಇಷ್ಟರಿಂದಲೇ ಸಂತುಷ್ಟನಾಗಲಿಲ್ಲ. "ಯಾವಾಗ ತರುವಿಯಪ್ಪಾ? ಸಂಜೆಯು ಮುಂದೆಯೆ?"

ನೃಪೇಶನಿಗೆ ಹೇಗಾದರೂಮಾಡಿ ಅವನನ್ನು ಸಂತೈಸಿ, ತೀವ್ರ ಕಚೇರಿಗೆ ಹೋಗಬೇಕಿತ್ತು. "ನಾಳೆ ಮುಂಜಾನೆ ತರುತ್ತೇನಪ್ಪಾ" ಎಂದು ಮಾತು ಕೊಟ್ಟು; ಒಂದು ನಿಶ್ಚಿತ ವೇಳೆ ಹೇಳಲ್ಪಟ್ಟದರಿಂದ ಮಗನು ಸಂತುಷ್ಟನಾದ; ತಂದೆಯನ್ನು ಆಗಬಿಟ್ಟು ಆಡಲು ಹೊರಗೆ ಓಡಿದನು.

ನೃಪೇಶನು ಮನೆಬಿಟ್ಟು ಹೊರಗೆ ಹೋದಾಗಲೇ ಇದರ ವಿಷಯವಾಗಿ ಮರೆತುಬಿಟ್ಟನು ಆದರೆ ಶೋಕನ ಜ್ಞಾಪಕಶಕ್ತಿಮಾತ್ರ ನೃಪೇಶನಂತಿರ ಲಿಲ್ಲ. ಮರುದಿನ ನೃಪೇಶ ಹಾಸಿಗೆಯಿಂದ ಏಳುವದಕ್ಕೂ ಶೋಕನು ಬಂದು ತ್ರಾಸುಕೊಡುವದಕ್ಕೂ ಸರಿಹೋಯಿತು; ಶೋಕಾ ಅಂದು ಮೋರೆ ತೊಳೆಸಿಕೊಳ್ಳುವದಕ್ಕೂ, ತಿಂಡಿ ತಿನ್ನಲಿಕ್ಕೂ, ತಿರುಗಾಡಲಿಕ್ಕೆ ಹೋಗುವ ದಕ್ಕೂ ಒಲ್ಲೆನೆಂದು ಹಟಹಿಡಿದ. ಮೂರುಗಾಲಿಯ ಸೈಕಲ್ಲ ತಂದುಕೊಡುವ ದಾಗಿ, ನೃಪೇಶ ವಚನವಿತ್ತಿದ್ದಾನೆ ಅದು ಅವನಿಗೆ ಬೇಕಿತ್ತು

ನೃಪೇಶನಿಗೆ ಅತೀವ ಸಂಕಟಕ್ಕಿಕ್ಕಿಕೊಂಡಿತು. ಅಷ್ಟು ಹೆಚ್ಚು ಬೆಲೆ ಕೊಟ್ಟು ಅವನು ಕೊಳ್ಳಲು ಸಾಧ್ಯವಿಲ್ಲ; ಮನೆಯ ಖರ್ಚನ್ನೇ ಸಾಗಿಸಿ ಕೊಂಡು ಹೋಗಲು ಸಾಧ್ಯವಿರುತ್ತಿರಲಿಲ್ಲ; ಇಂಥದರಲ್ಲಿ ಮಾತುಕೊಟ್ಟು ಮೂರ್ಖನಾಗಬೇಕಿತ್ತೇಕೆ? ಯಾರಾದರೂ ಗೆಳೆಯರಾದರೂ ಸಾಲಕೊಟ್ಟಿ ದ್ದರೆ ಅವನು ತರಬಹುದಾಗಿತ್ತು. ಆದರೆ ಅವನ ಗೆಳೆಯರಾದರೂ ಮಂದ ಮತಿಗಳಾಗಿರಲಿಲ್ಲ, ಇನ್ನೂ ಇವನಿಂದಲೇ ಸಾಲ ಒಯ್ಯಲಿಕ್ಕೆ ತಯಾರಿದ್ದರು; ಆದರೆ ಸಾಲಕೊಡುವದಕ್ಕೆ ಸಿದ್ಧರಿರಲಿಲ್ಲ.

ಆದರೂ ಅವನು ಮಾತೃಹೀನ ಮಗುವನ್ನು ಸಂತೈಸಲೇಬೇಕಾಗಿತ್ತು; ಒಂದು ತಪ್ಪನ್ನು ತಿದ್ದಿಕೊಳ್ಳಲು ಮತ್ತೊಂದು ತಪ್ಪುಮಾಡುತ್ತಿದ್ದನು; ಒಂದು ಸುಳ್ಳನ್ನು ಮುಚ್ಚಿಕೊಂಡು ಹೋಗಲು ಹತ್ತು ಸುಳ್ಳು ಹೇಳುತ್ತಿದ್ದನು. "ಚಿನ್ನಾ ಈಗ ಆಡಲಿಕೆ ಹೋಗಪ್ಪಾ, ನಾಳೆ ಬೇಗ್ಗೆ ಖಂಡಿತ ತರುವೆ" ಎಂದು ಮಗನನ್ನು ಸಂತೋಷಪಡಿಸಿದನು ಶೋಕಾ ಸದ್ಯ ಸಂತುಷ್ಟನಾಗಿ ಹಾಲುಕುಡಿಯಲಿಕ್ಕೆ ಹೋದನು.

ಊಟವಾದನಂತರ ನೃಪೇಶನು ಉದ್ದರಿಯಿಂದಾಗಲೀ ಇಲ್ಲವೆ ಕಂತ ದಿಂದಾಗಲೀ ಒಂದು ಟ್ರೈಸಿಕಲ್ಲ ಕೊಂಡುಕೊಳ್ಳಲು ಎಲ್ಲ ಕಡೆಗೆ ತಿರುಗಿದರೂ ಒಬ್ಬರೂ ಒಪ್ಪಲಿಲ್ಲ. ನಂತರ ಎಲ್ಲಿಯಾದರೂ ಸಾಲತೆಗೆಯಲು ಪ್ರಯತ್ನಿಸಿದ; ಅದೂ ಕೈಗೂಡಲಿಲ್ಲ, ಸಂಜೆಗೆ ನುಗ್ಗೆದ್ದು, ನಿರಾಶನಾಗಿ ಮನೆಗೆ ಬಂದು

ಹಾಸಿಗೆಯಮೇಲೆ ಉರುಳಿದನು; ಆಳು ಊಟಕ್ಕೆ ಎಷ್ಟು ಎಬ್ಬಿಸಿದರೂ ಏಳದೆ ಒಲ್ಲೆನೆಂದು ಬಿಟ್ಟನು.

ಮರುದಿನ ಬೆಳಿಗ್ಗೆ ಹಾಸಿಗೆಯಿಂದ ಏಳಲಿಕ್ಕೆ ಆವನ ಮನಸ್ಸಿನಲ್ಲಿ ಒಂದು ತೆರನಾಗಹತ್ತಿತ; ಬೋಳಕನಿಗೆ ಎದ್ದು ಮುಖವನಾದರೂ ತೋರಿಸುವದು ಹೇಗೆ? ತುಂಬಾ ಛಾದರವನ್ನು ಹೊದೆದುಕೊಂಡು ಹಾಸಿಗೆಯಲ್ಲಿಯೇ ಮಲಗಿಬಿಟ್ಟ. ಆದರೆ ಶೋಕಾ ಮರೆತಿರಲಿಲ್ಲ; ಅಲ್ಲಿಗೇ ಬಂದನು. ಹೊದೆದ ಛಾದರವನ್ನು ಜಗ್ಗುತ್ತ "ಏಳಪ್ಪಾ, ಹೊತ್ತು ಬಹಳವಾಗಿದೆ: ಹೊರಗೆ ಬಿಸಿಲುಬಿದ್ದಿದೆ, ನನಗೆ ಸಾಯಕಲ್ಲ ಈಗ ತರುವದಿಲ್ಲವೆ?" ಎಂದು ಕೂಗ ಹತ್ತಿದ. ನೃಪೇಶನ ಹೃದಯ ಒಡೆಯುವಂತಾಯಿತು; ಅಯ್ಯೋ, ಜೀವನವೇ ಸಾಟಿಕೆಗೇಡು, ವಾತ್ಸಲ್ಯವಂತೆ ವಾತ್ಸಲ್ಯ; ಬರಿಯ ಮೃಗಜಲ; ತನ್ನ ಕೂಸಿನ ಪುಟ್ಟಬಯಕೆಯೊಂದನ್ನು ಕೊನೆಗಾಣಿಸುವ ಸಾಮರ್ಥ್ಯವಿಲ್ಲ ನೃಪೇಶನಿಗೆ. ಮಗನಿಗೆ ಉತ್ತರವನ್ನಾದರೂ ಏನು ಕೊಡುತ್ತಾನೆ? ಕೊನೆಗೆ ಶೋಕಾ ಛಾದರ ಹೊದೆದುದನ್ನು ಪೂರ್ಣ ತೆಗೆದು ಕೇಳಿದ.

"ಎಲ್ಲಿದೆಯಪ್ಪಾ ಮೂರುಗಾಲಿ ಸೈಕಲ್ಲು? ನೀನು ಯಾವಾಗ ತರುತ್ತಿ?......"

ನೃಪೇಶ ಅಪಮಾನದಿಂದ ಕುಂದಿಹೋಗಿದ್ದ. ಬೇರೆಯಾವ ಉಪಾಯವೇ ಇರಲಿಲ್ಲ ಮಗುವನ್ನು ಬೆದರಿಸಿದ.

"ಕೆಟ್ಟ ಹುಡುಗನ್ನ ತಂದು; ಹೋಗು ಹೊರಗೆ ಹಗಲೆಲ್ಲ ಬರೇ ತ್ರಾಸುಕೊಡಲಿಕ್ಕೆ ಬರತಾನ; ಶೋಕಾ ತನ್ನ ಜೀವನದಲ್ಲಿಯೇ ಯಾರಿಂದಲೂ ಇಂಥ ಬಿರಿನುಡಿಗಳನ್ನು ಆಡಿಸಿಕೊಂಡಿರಲಿಲ್ಲ. ಹಾಗೆ ನೆಲದ ಮೇಲೆ ಬಿದ್ದು ಉರುಳಾಡಿ ದೊಡ್ಡ ಧ್ವನಿ ತೆಗೆದು ಆಳಲಿಕ್ಕೆ ಪ್ರಾರಂಭಿಸಿದ್ದ. ಆಯು ಮಗ್ಗುಲದ ಕೋಣೆಯಲ್ಲಿ ಯಾವದೋ ಕೆಲಸದಲ್ಲಿ ಮಗ್ನಳಾಗಿದ್ದಳು. ಮಗುವಿನ ಆಳುವ ಧ್ವನಿಯನ್ನು ಕೇಳಿ, ಅಲ್ಲಿಗೆ ಬಂದು ಅವನನ್ನು ಎತ್ತಿಕೊಂಡು, ನೃಪೇಶನ ಕಡೆಗೆ, ಮಗುವನ್ನು ಏಕೆ ಹೀಗೆ ಅಳಿಸುತ್ತೀರಿ ಎಂದು ಕೇಳುವ ನೋಟದಿಂದ ನೋಡಿದಳು. ಆದರೆ ಅವನು ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡಿದ್ದ. ಕಂಬನಿಗಳು ಬೆರಳುಗಳ ಸಂದುಗಳಲ್ಲಿಂದ ಹರಿದು ಬರುತ್ತಿದ್ದವು. ಆಳ ಶೋಕಾನನ್ನು ಕರೆದುಕೊಂಡು ಬೇರೆ ಕಡೆಗೆ ಹೋಗಿ ಎಷ್ಟೋ ತಿನಸು ಕೊಟ್ಟಳು. ಆ ತಿನಸುಗಳನ್ನು ನೋಡಿ ಶೋಕಾ ಸಾಯಕಲ್ಲ ಮರೆತನು, ಆಳ ಶೋಕಾನಿಗೆ ಕಳುಹಿಳು.

"ನೀನು ಜಾಣ ಹುಡುಗನೆಂದು ತಿಳಿದಿದ್ದೆನಪ್ಪಾ ಇಷ್ಟು ದಿವಸ; ಆದರೆ ನೀನು ಉದ್ಧಟ, ದಡ್ಡ ಖೋಡಿ, ಯಾಕೆ ತಂದೆಗೆ ಕಷ್ಟಕೊಟ್ಟಿ?"

ಖೋಕಾನಿಗೆ ಆಶ್ಚರ್ಯವಾಯಿತು. ತಾನು ತಂದೆಗೆ ಕಷ್ಟಕೊಟ್ಟಿಲ್ಲವೆಂದು ಹೇಳದೆ ಅದಕ್ಕೆ ಬದಲಾಗಿ ಅವನೇ ತನ್ನನ್ನು ನೂಕಿ ಒಯ್ದನೆಂದು ತಿಳಿಸಿದನು. ಆಯಿ ಯಾವದೂ ಜ್ಞಾನವಿಲ್ಲದ ಬಾಲಕನಿಗೆ ಏನೇನೊ ತಿಳಿಸಿ ಹೇಳಿ, "ಇನ್ನು ನಿನ್ನ ತಂದೆಗೆ ಸಾಯಿಕಲ್ಲ ಕೇಳಬೇಡಪ್ಪಾ, ಅವನಿಗೆ ದುಃಖವಾಗುತ್ತದೆ. ನಿನಗೆ ಬೇರೆ, ಅದಕ್ಕೂ ಚೆಂದ ಆಟಿಗೆ ಕೊಡುತ್ತೇನೆ. ನೀನು ಹಟಮಾಡಿದ ಕೂಡಲೇ ನಿಮ್ಮ ತಂದೆ ಅಳುತ್ತಾರೆ. ಜಾಣ ಹುಡುಗರು ಎಂದೂ ತಮ್ಮ ತಂದೆಗಳನ್ನು ಅಳಿಸುವದಿಲ್ಲ" ಸಮಾಧಾನ ಪಡಿಸಿದಳು. ಖೋಕಾನಿಗೂ ಕೆಡುಕೆನಿಸಿರಬೇಕು. ಒಂದು ಕ್ಷಣ ಮಾತನಾಡದೆ ಹಾಗೆಯೇ ಕುಳಿತು ತಾನೂ ಕಣ್ಣೀರು ಸುರಿಸಿ ಆಯಿ ಹೇಳಿದ್ದಕ್ಕೆಲ್ಲ ಒಪ್ಪಿಕೊಂಡನು.

ಆಯಿಯು ಖೋಕಾನನ್ನು ತಿರುಗಾಡಿಸಿಕೊಂಡು ಪುನಃ ಬಂದರೂ ನೃಪೇಶ ಆ ಸ್ಥಳ ಬಿಟ್ಟು ಕದಲಿರಲಿಲ್ಲ. ಚಹವನ್ನೂ ತಕ್ಕೊಂಡಿರಲಿಲ್ಲ. ತಿರುಗಾಡಲೂ ಹೋಗಲಿಲ್ಲ. ಆಯಿ ಹುಡುಗನನ್ನು ಕೆಳಗೆ ಇಳಿಸಿದಳು. ಅವನು ತಂದೆಯ ಒಳಗೆ ಹೋಗಿ ಹೇಳಿದ

"ಅಪ್ಪಾ, ಏಳು, ನೀರು ಕುಡಿ; ಇನ್ನು ನಾನು ಟ್ರೈಸಿಕಲ್ಲ ಎಂದೂ ಬೇಡುವದಿಲ್ಲ .. ...."

ನೃಪೇಶನಿಗೆ ಕಣ್ಣೀರು ಉಕ್ಕಿ ಬಂದವು. ಇತರರಿಗೆ ಅವುಗಳನ್ನು ಕಾಣಿಸಬಾರದೆಂದು ಬೇರೆ ಕೊಟ್ಟಡಿಗೆ ಹೋದನು. ಖೋಕಾ ಆಯಿಯ ಕಡೆಗೆ ನೋಡಿದ; ಆಕೆಯ ಕಂಗಳಲ್ಲಿಯೂ ನೀರು ಧಾರೆ ಧಾರೆಯಾಗಿ ಸುರಿಯುತ್ತಿತ್ತು. ಖೋಕಾನಿಗೆ ಅತಿ ದುಃಖವಾಯಿತು; ಧ್ವನಿತೆಗೆದು ಅತ್ತನು. ಟ್ರೈಸಿಕಲ್ಲ ನೆನಪು ತೆಗೆದ ಕೂಡಲೇ ಎಲ್ಲರೂ ಯಾಕೆ ದುಃಖಿಸುವರೆಂಬುದು ಅವನಿಗೆ ತಿಳಿಯದೆ ಹೋಯಿತು. ಆಯಿ ಅವನನ್ನು ಸಂತೈಸಬೇಕಾದರೆ ಈ ಸಲ ಕುಂ ಕೋಣ ಬೇಳಬೇಕಾಯಿತು.

ಊಟಮುಗಿದ ನಂತರ ಮಗುವನ್ನು ಮಲಗಿಸಿ ಆಯಿಯು ಹೊರಗೆ ಹೋದಳು. ಹರನಾಥನೊಂದಿಗೆ ಆಕೆ ಮಾತಾಡುತ್ತಿರಲಿಲ್ಲ. ಆದರೂ ಇಂದು ಆಕೆ ಅವನ ಬಳಿಗೆ ಹೋಗಿ, ವಿನಯದಿಂದ, ತಾನು ಒಂದು ಅಗತ್ಯ

ಕೆಲಸಕ್ಕಾಗಿ ಹೊರಗೆ ಹೋಗಬೇಕಾಗಿರುವದೆಂದೂ, ಆದ್ದರಿಂದ ಮಗುವನ್ನು ನೋಡಿಕೊಳ್ಳಬೇಕೆಂದೂ, ಅವನು ಎದ್ದರೆ ಹಾಲು ಕುಡಿಸೆಂದೂ, ಬಹಳ ಮಾಡಿ ತಾನು ನಾಲ್ಕು ಬಡಿಯುವದರೊಳಗಾಗಿ ಬರಬಹುದೆಂದೂ ಹೇಳಿ ಹೋದಳು.

ಹರನಾಥನು ಎಂದೂ ಆಕೆಯ ಮಾತನ್ನು ನಡೆಯಿಸಿದವನಲ್ಲ. ಆದರೂ ಇಂದು ಯಾಕೋ ಒಪ್ಪಿದನು ಒಲ್ಲೆನೆನ್ನಲು ಮನಸ್ಸಾಗಲಿಲ್ಲ. ಖೋಕಾ ಪ್ರತಿದಿನ ಏಳುವ ಹೊತ್ತಿಗೆ ಎದ್ದು ಆಯಾಳನ್ನು ಕಾಣದೆ ಅಳಲಿಕ್ಕೆ ಮೊದಲು ಮಾಡಿದ. ಹರನಾಥ ಹಾಲು ಕುಡಿಸಲಿಕ್ಕೆ ಹೋದನು. ಅವನ ಕೈಯೊಳಗಿನ ಹಾಲಿನ ಬಟ್ಟಲವನ್ನು ಜಾಡಿಸಿ ಒದ್ದುಬಿಟ್ಟನು. ಅದೃಷ್ಟಕ್ಕೆ ಆಯ ತೀವ್ರವೇ ಬಂದುಬಿಟ್ಟಳು ಇಲ್ಲವಾದರೆ ಖೋಕಾ ಹರನಾಥನಿಗೆ ಇನ್ನೂ ಎಷ್ಟು ನರಕ ಶಿಕ್ಷೆಕೊಡುತ್ತಿದ್ದನೊ?

ಆಯಳನ್ನು ಕಂಡಾಕ್ಷಣ ಖೋಕಾನ ಅಳುವದು ಇನ್ನೂ ಹೆಚ್ಚಾಯಿತು. ಆಕೆ ಅವನನ್ನು ಎತ್ತಿಕೊಂಡು ಮಲಗುವ ಕೋಣೆಗೆ ಹೋದಳು. ಮರುಕ್ಷಣದಲ್ಲಿ ಖೋಕಾ ಟ್ರೈಸಿಕಲ್ಲ ಮೇಲೆ ಕುಳಿತು ಮರೆಯಹತ್ತಿದ. ಆಯ ಕೋಣೆಯಲ್ಲಿ ಆ ಮೂಲೆಯಿಂದ ಈ ಮೂಲೆಗೆ ಎಳೆಯುತ್ತ ಆಡಿಸುತ್ತಿದ್ದಳು. ಖೋಕಾನಿಗೆ ಆಂದು ಆದ ಆನಂದ ಅಷ್ಟಿಷ್ಟಲ್ಲ ಖೋಕಾನ ಅಳುವು ಇಷ್ಟರಲ್ಲೇ ಅಡ್ಡಮಳೆ ಬಂದು ನಿಂತಂತಾದುದನ್ನು ತಿಳಿದ ಹರನಾಥ ಆಶ್ಚರ್ಯಬಟ್ಟು ಕೋಣೆಯಲ್ಲಿ ಇಣಕಿ ಹಾಕಿ ಆ ದೃಶ್ಯವನ್ನು ಕಂಡನು. ಮನಸ್ಸಿಗೆ ಚೇಳು ಕಡಿದಂತಾಗಿಹಂತಿರುಗಿದ. ಹರನಾಥ ದುಡ್ಡು ತಕ್ಕೊಂಡು ದುಡಿಯುತ್ತಾನೆ ಆಯಹಾಗೆಯೇ ದುಡಿಯುತ್ತಾಳೆ. ಆದರೂ ಖೋಕಾನಿಗೆ ಆಕೆ ನೂರುಗಾಲಿ ಸಾಯಿಕಲ್ಲ ತಂದಿದ್ದಾಳೆ. ಆದ್ದರಿಂದ ತಾನು ಆಕೆಗಿಂತ ಕಡಿಮೆಯ ತರಗತಿಯವನೆಂಬಂತೆ ಅವನಿಗೆನಿಸಿತು. ಆಕೆ ಸೈಕಲ್ಲ ತಂದ್ದರಿಂದ ತನಗಿಂತಲೂ ಒಡೆಯರು ಆಕೆಯನ್ನು ಹೆಚ್ಚಾಗಿ ಪ್ರೀತಿಸುವಳು. ಆದರೂ ಈ ಹೆಂಗಸಿಗೆ ದುಡ್ಡು ಎಲ್ಲಿಂದ ಬಂತು ? ಎಂದು ಇನ್ನೊಂದು ಕ್ಷಣದಲ್ಲಿ ವಿಚಾರ ಮಗ್ನನಾದನು.

ನೃಪೇಶ ಬಂದಾಕ್ಷಣವೇ ಹರನಾಥ ಅವನಿಗೆ ಈ ಸುದ್ದಿ ತಿಳಿಸಿದ. ಅವನೂ ಅಚ್ಚರಿಬಟ್ಟು ಆಕೆಯನ್ನು ಕರೆಕಳಿಸಿದ. ಆಕೆ ಬಂದಳು; ಸಾಯಿಕಲ್ಲ ಕೊಳ್ಳಲಿಕ್ಕೆ ಅವಳಿಗೆ ದುಡ್ಡು ಎಲ್ಲಿತ್ತೆಂದು ಕೇಳಿದನು. ಆಕಯು

ಮೋಕನ ತಾಯಿಯು ಸಾಯುವಾಗ ತನ್ನಲ್ಲಿ ಕೆಲವೊಂದು ಹಣವನ್ನು ಕೊಟ್ಟು, ಆದನ್ನು ಮಗುವಿಗಾಗಿ ಅಗತ್ಯಬಿದ್ದರೆ ಖರ್ಚು ಮಾಡೆಂದು ಹೇಳಿದ್ದಳೆಂದೂ ಆ ಹಣದಿಂದಲೇ ಈಗ ಕೊಂಡು ತಂದೆನೆಂದೂ ಹೇಳಿದಳು.

ನೃಪೇಶನಿಗೆ ಆಕೆ ಹೇಳಿದುದೇನೂ ಅಸತ್ಯವಾಗಿ ತೋರಲಿಲ್ಲ. ವಿನೋದಿನಿಯು ತನಗೆ ನ್ಯಾಯವಮಾತ್ರ ಮಾಡಲಿಲ್ಲವೆಂದು ಆತನಿಗೆ ಅನಿಸಿತ್ತು. ಮಗನನ್ನು ತಾನು ಚೆನ್ನಾಗಿ ಜೋಪಾನ ಮಾಡುವೆನೆಂಬುದರಲ್ಲಿ ಆಕೆ ವಿಶ್ವಾಸವಿಟ್ಟಂತಾಗಿರಲಿಲ್ಲ. ಇಲ್ಲವಾದರೆ ಆಕೆ ಮಗನಿಗಾಗಿ ಹಣವನ್ನು ಇಟ್ಟು ಹೋಗುತ್ತಿರಲಿಲ್ಲ; ಆ ಹಣವನ್ನೂ ತನ್ನ ಹತ್ತಿರವಾದರೂ ಇಡಲಿಲ್ಲಲ್ಲ, ಅದನ್ನೂ ಆಯಳ ಕೈಯಳ ಕೈಯಲ್ಲಿ ಇಟ್ಟಿದ್ದಾಳೆ. ತಾನು ದುಂದುಮಾಡಿ ಹಾಳುಮಾಡುತ್ತೇನೆಂದು ಅಂಜಿದ್ದಳೋ ಏನೊ ಎಂದು ವಿನೋದಿನಿಯನ್ನು ನೆನೆದು ವ್ಯಥೆಬಟ್ಟನು. ಮರುಕ್ಷಣದಲ್ಲಿ ಅವನ ವಿಚಾರಗಳು ಅವನಿಗೇ ನಾಚಿಕೆಯನ್ನುಂಟುಮಾಡಿದವು. ವಿನೋದಿನಿಯು ಮಾಡಿದ್ದಾದರೂ ಯಾರ ಮಗನಿಗಾಗಿ? ಅವನು ತನ್ನ ಮಗನಲ್ಲವೆ? ಹುಡುಗನ ಒಂದು ಪುಟ್ಟ ಬಯಕೆಯನ್ನು ತುಂಬಿಕೊಡಲು ತನ್ನಿಂದಾಗಲಿಲ್ಲ, ಇಂಥ ಸಂದರ್ಭಬಂದರೆ ಇರಲೆಂದು ಆಕೆ ಹಾಗೆ ಮಾಡಿದ್ದಳು.

ಮೋಕಾ ಟ್ರೈಸಿಕಲ್ಲ ದೊರೆತ ಆನಂದದೊಳಗೆ ಊಟಮಾಡುವದನ್ನೂ ಹಾಲುಕುಡಿಯುವದನ್ನೂ ಮರೆತುಬಿಟ್ಟನು. ಹಗಲು ಇರುಳೆನ್ನದೆ ಅದರ ಮೇಲೆ ಕೂತು ಬಿಡುತ್ತಿದ್ದನು. ಹರನಾಥನು ಅದನ್ನು ತೀವ್ರವಾಗಿ ಜಗ್ಗಿಕೊಂಡು ಹೋಗುತ್ತಿದ್ದನು; ಆದ್ದರಿಂದ ಮೋಕಾ ಆಯಳಿಗೆ ಬದಲಾಗಿ ಹರನಾಥನನ್ನೇ ಅದನ್ನು ಜಗ್ಗಲಿಕ್ಕೆ ಹೇಳುತ್ತಿದ್ದನು. ಆಯ ಇನ್ನೂ ಬೆಳಕಿನಲ್ಲಿ ಏಳುವ ಮೊದಲೇ ಹರನಾಥ ಮೋಕಾ ಇಬ್ಬರೂ ಬೀದಿಯಲ್ಲಿ ಅದರೊಂದಿಗೆ ನಿಂತುಬಿಟ್ಟಿರುತ್ತಿದ್ದರು. ಹತ್ತಿರ ಮನೆಯ ಓಡಿಸಾ ಆಳಿಗೂ ಅವರ ಆನಂದ, ಕೇಕೆಗಳನ್ನು ಕೇಳಿ ನಾಚಿಕೆ ಬರುವಂತಿರುತ್ತಿತು; ಆಯಳಿಗೆ ಸಿಟ್ಟು ಬಂತು. ಬೀದಿಗೆ ಹೋಗಿ "ಬಾರಪ್ಪಾ, ಮಗೂ, ಹಾಲು ಕುಡಿಯಲಿಕ್ಕೆಬಾ," ಎಂದು ಕರೆದಳು. ಮೋಕಾ ತಲೆಯನ್ನು ಅಲ್ಲಾಡಿಸಿ "ಊಹೂಂ, ನನಗೆ ಹಾಲುಬೇಕಿಲ್ಲ; ಹರನಾಥ ಇನ್ನೂ ಜೋರು" ಎಂದು ಆಯಳ ಕಡೆಗೆ

ನೋಡದೇ ಹರನಾಥನಿಗೆ ಆಜ್ಞೆ ಇತ್ತ; ಆಯಳು ಒತ್ತಾಯದಿಂದ ಅವನನ್ನು ಸಾಯಳಲ್ಲವೋಲಿಂದ ಎತ್ತಿಕೊಂಡು ಹರನಾಥನಿಗೆ ಚೆನ್ನಾಗಿ ಬಯ್ದಳು

ದುಡ್ಡಿಗಾಗಿ ಆತುರರಾಗಿರುವ ಉಳಿದವರು ಎಂದೂ ಕೆಲಸಗಳನ್ನು ದುಡ್ಡಿನಷ್ಟೇ ಆತುರತೆ ತೋರಿಸಿ ಮಾಡುವದಿಲ್ಲ. ಇಷ್ಟು ಹೊತ್ತಾಯಿತು, ಇನ್ನೂ ಬಾಬುಗಳ ಅಡಿಗೆಗಾಗಿ ಒಲೆ ಹೊತ್ತಿಸಿಲ್ಲ, ಅಡಿಗೆ ತಾನೇ ಗಾಳಿಯಲ್ಲಿ ಆಗಬೇಕೆ? ಖೋಕಾನನ್ನು ಆಡಿಸಲಿಕ್ಕೆ ನಿನಗಾರು ಹೇಳಿದರು? ಅವನನ್ನು ಆಡಿಸುವದಕ್ಕೆ ಬೇರೆ ಜನರಿದ್ದಾರೆ."

ಖೋಕಾನನ್ನು ಒತ್ತಾಯವಾಗಿ ಕಸಿದುಕೊಂಡದ್ದು ಅವನಿಗೆ ಸರಿಬರಲಿಲ್ಲ; ದೊಡ್ಡಧ್ವನಿದೆಗೆದು ಕಿರುಚುತ್ತ, ಆಯಳನ್ನು ಒದೆದು, ಆಕೆಯ ಕೂದಲುಗಳನ್ನು ಮುಷ್ಟಿಯಿಂದ ಹಿಡಿದು ಹರಿದನು ಆದರೂ ಆಕೆ ಬಿಡಲಿಲ್ಲ; ಅಟ್ಟದಮೇಲೆ ತಕ್ಕೊಂಡು ಹೋಗಿ, ಹಾಲು, ಬ್ರೆಡ್ಡು, ತತ್ತಿ ಎಲ್ಲ ತಿನಿಸಿದಳು. ಆಕೆ ಕೈಬಿಡುವದೊಂದೇ ತಡ; ಅವನು ಅಡಿಗೆ ಮನೆಗೆ ಓಡಿಹೋಗಿ ಹರನಾಥನಿಗೆ ಹೇಳಿದ. "ಹರನಾಥ, ಬಾ; ಈ ಸಲ ಮತ್ತೆ ಜೋರಿನಿಂದ ಓಡಿಸುವಿಯಂತೆ"

ಹರನಾಥನಿಗೆ ಆಯಳೊಂದಿಗೆ ಎದುರಿನಲ್ಲಿ ನಿಂತು ಜಗಳವಾಡುವ ಧೈರ್ಯವಿರಲಿಲ್ಲ; ತಾನು ಆಕೆಗೆ ಸಾಟಿಯೂ ಅಲ್ಲವೆಂಬುದೂ ತಿಳಿದಿತು; ಒಂದು ವೇಳೆ ಜಗಳಮಾಡಿ ಒಡೆಯರ ವರೆಗೆ ಹೋದರೂ ಅವರು ಯಾವ ನಿರ್ಣಯವನ್ನು ಮಾಡುವದಿಲ್ಲವೆಂಬುದೂ ತಿಳಿದಿತ್ತು; ಅದಕ್ಕಾಗಿಯೇ ಖೋಕಾ ಕರೆದರೆ ಒಲ್ಲೆನೆಂದ; ಒಲೆಯಲ್ಲಿ ಇದ್ದಲಿ ತುಂಬುತ್ತ ಹೇಳಿದ

"ಪುಟ್ಟ ಧನಿಯರೆ, ನಾನು ಬರುವದಿಲ್ಲ. ನಿಮ್ಮ ಆಯಳನ್ನು ಕರೆದುಕೊಂಡು ಹೋಗಿರಿ, ಇನ್ನೊಮ್ಮೆ ನಿಮ್ಮನ್ನು ನಾನು ಹೊರಗೆ ಕರೆದೊಯ್ದರೆ ಆಕೆ ನನ್ನನ್ನು ಜೀವಂತವಾಗಿಯೇ ನುಂಗಿ ಬಿಡುವಳು. ನಿಮ್ಮ ನಡುವೆ ಬರಲಿಕ್ಕೆ ನಾನೊಲ್ಲೆ ನನಗೇ ಮಾಡಬೇಕಾದ ಕೆಲಸ ಬೇಕಾದಷ್ಟಿದೆ"

ಖೋಕಾ ಮತ್ತೆ ಆಯಳ ಬಳಿಗೆಯೇ ಹೋಗಬೇಕಾಯಿತು. ಆಕೆಗೆ ವ ಗಿತ್ತು ಆಗಲೇ. ಖೋಕಾನನ್ನು ಎತ್ತಿ ಎದೆಗೆ ಅಪ್ಪಿಕೊಂಡರೂ ಆಕೆಯ ಎದೆಯೊಳಗಿನ ಉಮ್ಮಳಿಕೆ ಹಿಂಗಲಿಲ್ಲ ಹುಡುಗನನ್ನು ಬೇರೆ ಹುಕ್ಕೊಬ್ಬ ಹುಡುಗನನ್ನು ಕಂಡಂತಾಯಿತು. ಮೊದಲು "ಅಮ್ಮಾ"

ಎಂದು ಕರೆದ ಖೋಕಾ-ಒಬ್ಬ ಬೇರೆ, ಈ ಖೋಕಾ ಬೇರೆ ಎಂದು ಆಕೆಗೆ ಎನಿಸಹತ್ತಿತು. ಇಷ್ಟೆಲ್ಲ ತಾಯಿ ಮಕ್ಕಳಲ್ಲಿ ವಿಷವನ್ನು ಹರನಾಥ ಬೆರೆಯಿಸಿದ್ದ. ಆಕೆ ನಿತ್ಯದಂತೆ ಅವನಿಗೆ ಸ್ನಾನಮಾಡಿಸಿ, ಉಣ್ಣಿಸಿ, ಮಲಗಿಸಿದರೂ, ಆಕೆಗೆ ಹಿಂದಿನ ಆನಂದ ಇಂದು ಎಲ್ಲಿಯೋ ಮಾಯವಾಗಿದೆಯೆಂದು ಅನಿಸಹತ್ತಿತು. ಸಂಜೆಯ ವರೆಗೆ ಹೇಗೊ ಹೊತ್ತು ಕಳೆದಳು; ಇಳಿಹೊತ್ತಿನಲ್ಲಿ ಮಗುವನ್ನು ತಿರುಗಾಡಿಸಿಕೊಂಡು ಬರಲು ಕರೆದಳು

ಆಕೆ, ಅವನಿಗೆ ಅಂಗಿ ಚಡ್ಡಿ ತೊಡಿಸಿದಾಕ್ಷಣವೇ "ಮೂರುಗಾಲಿಯ ಬಂಡಿಗಾಗಿ ಅಳಹತ್ತಿದ. ಹಗಲು ಇರುಳು ಅದಕ್ಕೆ ಇಷ್ಟು ಹಟಮಾಡಿದರೆ ಅದನ್ನು ಒಯ್ದು ಹೊಳೆಯಲ್ಲಿ ಚೆಲ್ಲಿಬಿಡುವೆನೆಂದು ಹೆದರಿಕೆ ಹಾಕಿದಳು. ಅವನು ಇಷ್ಟು ಹಟಮಾರಿಯಾಗುವನೆಂದು ಮೊದಲೇ ತಿಳಿದಿದ್ದರೆ ಆಕೆ ಅದನ್ನು ತರುತ್ತಲೇ ಇರಲಿಲ್ಲ. ಖೋಕಾ ಆಕೆಯ ಕೊಂಕುಳೊಳಗಿಂದ ಜಿಗಿದು ಹರನಾಥನ ಬಳಿಗೆ ಹೋಗಿ "ಹರನಾಥ, ನೀನೇ ಬಾ; ನಿನ್ನೊಂದಿಗೆ ನಾನು ಆಡುತ್ತೇನೆ: ಅಮ್ಮಾ ಬಹಳ ಕೆಟ್ಟ ಇದ್ದಾಳೆ: ಆಕೆಯ ಬಳಿಗೆ ನಾನು ಹೋಗುವದಿಲ್ಲ" ಎಂದು ಕರೆದನು ಆಗ ಮನೆಯ ಬಾಗಿಲಲ್ಲಿ ತಲೆಹಾಕಿ ಹರನಾಥ ಹೇಳಿದ.

"ಇಲ್ಲಾ ಮಗು, ನಿನ್ನ ಅಮ್ಮನ ಹತ್ತಿರಹೋಗು. ನಿನಗಾಗಿ ಆಕೆಯೊಂದಿಗೆ ಹಗಲೆಲ್ಲ ಜಗಳಮಾಡಲಾರೆ" ಅವನ ಧ್ವನಿಯಲ್ಲಿ ಅಣಕವು ತುಂಬಿದಂತಿತ್ತು ಅದನ್ನು ಕೇಳಿ ಆಯಳ ನರನರಗಳಲ್ಲಿಯೂ ಸಿಟ್ಟು ಸಂಚರಿಸಿತು; ಈಗ ಜಗಳಮಾಡಿದರೆ ಕೂಸು ಪಾವಟಿಗೆಗಳಮೇಲಿಂದ ಉರುಳಬೀಳುವದೆಂದು ಸುಮ್ಮನಿದ್ದು, ಮತ್ತೆಹೋಗಿ ಖೋಕಾನನ್ನು ಹಿಡಿದು ತಂದಳು. ಖೋಕಾ ಮತ್ತೆ ಟ್ರೈಸಿಕಲ್ಲನ್ನು ಬೇಡಲಿಕ್ಕೆ ಅನುವಾದನು. ಆಕೆಗೆ ಹಣೆಹಣೆ ಬಡಿದುಕೊಂಡು ತನ್ನ ಕೂದಲುಗಳನ್ನೇ ಕಿತ್ತಿಕೊಳ್ಳುವಂತಾಯಿತು; ತಾನು ಯಾವ ಕಾರಣದಿಂದ ಈ ಸಾಯಿಕಲ್ಲನ್ನು ತಂದೆನೆಂದು ಆಕೆಗೆ ಪಶ್ಚಾತ್ತಾಪವಾಯಿತು. ಅದೇ ಅವರಿಬ್ಬರ ಪ್ರೇಮವನ್ನು ಕಡಿಮೆಮಾಡುತ್ತ ನಡೆದಿತ್ತು ಮಗು ಆಕೆಯನ್ನು ಮರೆತುಬಿಡುವ ಸಂಭವವಿತ್ತು. ಆಯಳು ಅವನಿಗೆ ಎಷ್ಟೋ ವಚನಗಳನ್ನಿತ್ತು ರಮಿಸಿದಳು. ಅವನು ಆಕೆಯ ಮಾತಿನಲ್ಲಿ ನಂಬಿಗೆಯಿಟ್ಟು ಒಂದು ಕ್ಷಣ ಸಾಯಿಕಲ್ಲ ಮರೆತನು; ಆಕೆ, ಅವನಿಗೆ ಟ್ರಿಪ್ಪು

ಹತ್ತಿ ಪ್ರಾಣಿಸಂಗ್ರಹಾಲಯಕ್ಕೆ ಹೋಗಿ, ಅಲ್ಲಿ ಹುಲಿ, ಆನೆಗಳನ್ನು ತೋರಿಸುತ್ತೇನೆಂದು ಹೇಳಿದ್ದಳು; ಒಂದು ಘಂಟೆ ಅತ್ತ ಇತ್ತ ಅಡ್ಡಾಡಿದರೂ, ಟ್ರಾಮು ಹತ್ತಲಿಲ್ಲ. ಮತ್ತು ಹುಲಿ ಆನೆಗಳನ್ನೂ ತೋರಿಸಲಿಲ್ಲ. ಅದರಿಂದ ಕುಪಿತನಾದ ಖೋಕಾ ಮನೆಗೆ ಮರುಳಿ ಬಂದೊಡನೆಯೇ ತನ್ನ ತಂದೆಯ ಬಳಿಗೆ ಹೋಗಿ ಆಯಳು ಕೆಟ್ಟ ಇರುವಳೆಂದೂ ಹರನಾಥನು ಒಳ್ಳೇಯವನೆಂದೂ ತಿಳಿಸಿದನು. ಆಯಳು ಅವನಿಗೆ ಹಾಲುಕುಡಿಸಲಿಕ್ಕೆ ಹೋದಳು, ಆಗ ಆಕೆಯ ಕೈಯನ್ನೆ ಕಡಿದುಬಿಟ್ಟನು.

ಅವನ ಈ ರೀತಿಯ ಸ್ವಭಾವದಿಂದ ಆಯಳಿಗೆ ತಲೆಬೇಸರವಿಟ್ಟಂತಾಗಿತ್ತು. ಅವನ ಬೆನ್ನಿಗೊಂದು ಸಾವಕಾಶವಾಗಿ ಗುದ್ದಿ, “ ಈಗಂತೂ ನೀನು ಅತೀವ ಉದ್ಧಟನಾದೆಯಪ್ಪಾ, ನೋಡಿಲ್ಲಿ, ಕೈಯಲ್ಲಿ ರಕ್ತ ಹೇಗೆ ಸುರಿಯುತ್ತಿದೆ ? ” ಎಂದು ತೋರಿಸಿದಳು; ಖೋಕಾ ಅಗಲವಾಗಿ ಬಾಯಿ ತೆರೆದು ಅಳುವದನ್ನು ಆಲಿಸಿ ಹರನಾಥ ಓಡಿಬಂದು ಆತನನ್ನು ಎತ್ತಿಕೊಂಡನು. ಬಾಲಕನ ಮೈಮೇಲೆ ಕೈಯಿಂದ ಸವರುತ್ತ ಹೇಳಿದ.

“ ಜನರು ಹೇಳುವದು ನಿಜ, ತಾಯಿಗಿಂತ ಹೆಚ್ಚಾದ ಮಮತೆಮಾಡುವಳು, ಮಾಟಗಾತಿಯೇಯಾಗಿರಬೇಕು' ತಂದೆಯಿರುವಾಗ ಎಷ್ಟೋ ಹಟ ಮಾಡುತ್ತಿದ್ದರೂ ಸಹಿತ ಅವನು ಹೋದಕೂಡಲೆ ಒಮ್ಮೆಲೇ ಮಗು ಸುಮ್ಮನಾಗಿ ಬಿಡುತ್ತದೆ. ಯಾರು ಹೇಳಬೇಕು ? ಎಷ್ಟೆಂದರೂ ನಾವು ದುಡ್ಡಿಗಾಗಿ ದುಡಿಯುವ ಊಳಿಗದವರು. ”

ಆಯಳಿಗೆ ಸರಿಯಾಗಿ ಬಂಗಾಲಿನುಡಿ ಬಾರದಿದ್ದರೂ ಹರನಾಥ ಅಂದದ್ದೆಲ್ಲದರ ಸಾರವನ್ನು ಗ್ರಹಿಸಿದಳು, ಬೇರೆ ಸಮಯವಾಗಿದ್ದರೆ, ದೊಡ್ಡ ಯುದ್ಧವೇ ನಡೆಯುತ್ತಿತ್ತು; ಆದರೆ ಇಂದು ಜಗಳಕ್ಕೆ ಹೋಗಲಿಲ್ಲ. ಅಲ್ಲದೆ ಆಕೆಯೂ ಮಗುವಿನ ನಂಬುಗೆಯಲ್ಲಿ ತನ್ನ ಒಲುಮೆಯನ್ನೇ ಕಳೆದುಕೊಂಡಿದ್ದಳು; ಅದಕ್ಕಾಗಿ ಆಕೆ ಸುಮ್ಮನಿದ್ದುಬಿಟ್ಟಳು; ತಮ್ಮ ಮರಿಗಳನ್ನು ಅಪಹರಿಸಿದಾಗ, ಹೆಣ್ಣು ಹುಲಿಯೊಂದು ಕಂಣು ತಿರಿಗಿಸುವಂತೆ ತಿರುಗಿಸುತ್ತ ಕುಳಿತಳು.

ಮರುದಿನ ಮುಂಜಾನೆ, ಟ್ರಾಯಿಸಿಕಲ್ಲ ಕಾಣೆಯಾಗಿತ್ತು. ಭೂಮಿಯೂ ಬಾನೂ ಒಂದಾಗುವಂತೆ ಖೋಕಾ ಅತ್ತನು ನೃಪೇಶ ಯಾವಾಗಲೂ ಮುಂಚೆಯ ಬಾಗಿಲು ತೆರೆದಿಡುತ್ತಿದ್ದ ಆಳಿಗೆ ಶಪಿಸಿದನು. ಹರನಾಥ

ಅದನ್ನು ಹುಡುಕಲು ತೊಡಗಿದ; ಮನೆಯಲ್ಲಿಯೇ ಯಾರಾದರೂ ಮನೆಯವರೇ ಕಳ್ಳರಾಗಿರಬೇಕೆಂದು ಸೂಚಿಸಿದ. ಆಯಳು ಮಾತ್ರ ಮೌನಳಾಗಿಯೇ ಇದ್ದಳು.

ಬಿರುಗಾಳಿ ಬೀಸಿಹೋದಮೇಲೆ ಮನೆಯು ಸ್ವಾಭಾವಿಕವಾಗಿ ಮೌನವಾಯಿತು. ನೃಪೇಶ ತನ್ನ ಕೆಲಸದಲ್ಲಿ ತೊಡಗಿದ. ಹರನಾಥ ಪೇಟೆಗೆ ಹೋದ. ಹಾಲನ್ನು ಅರ್ಧವೇ ಕುಡಿದು, ಅತ್ತು ಅತ್ತು ಸೋಫಾ ಮಲಗಿಕೊಂಡನು. ಆಯಳು ಮೌನಳಾಗಿ ವ್ಹರಾಂಡದಲ್ಲಿ ಕುಳಿತಿದಳು. ಒಮ್ಮೆಲೇ ಹರನಾಥ ಅಚ್ಚರಿಬಡುತ್ತ ಒಳನುಗ್ಗಿ ಕೇಕುತ್ತ "ಒಡೆಯರೆ, ಟ್ರಾಯಿಸಿಕಲ್ಲ ಸಿಕ್ಕಿತು" ಎಂದು ಹೇಳಿದ. ವ್ಹರಾಂಡದಲ್ಲಿ ಕುಳಿತ ಆಯಳ ಮುಖವು ಒಂದು ತೆರನಾಯಿತು ನೃಪೇಶ ಆತುರತೆಯಿಂದ ಕೇಳಿದ.

"ಎಲ್ಲಿ ಅದೆ?"

ಹರನಾಥ ಹೇಳಿದ.

ಬೀದಿಯ ಒಂದು ಮೂಲೆಯಲ್ಲಿ ಮುದಿ ಸಿಯುವರ ಒಂದು ಅಂಗಡಿ ಅದೆ. ಅಲ್ಲಿ ಅವನು ಹಳೆಯ ಸಾಯಕಲ್ಲಗಳನ್ನು ರಿಪೇರಿಮಾಡುತ್ತಾರೆ ಆಯ ನಸುಕಿನಲ್ಲಿಯೇ ಅಲ್ಲಿಗೆ ಒಯ್ದು, ಮಾರೆಂದು ಅವರಿಗೆ ಹೇಳಿದ್ದಾಳಂತೆ.

ತನ್ನ ಕಿವಿಗಳನ್ನೇ ನೃಪೇಶನಿಗೆ ನಂಬುವದಕ್ಕೆ ಆಗಲಿಲ್ಲ. ಆಯ ಹೀಗೇಕೆ ಮಾಡಿದಳು? ಆಕೆ ಕೆಲಸಕ್ಕೆ ಬಂದಂದಿನಿಂದ ಒಂದು ಕಾಸಿನ ಬೆಲೆಬರುವ ವಸ್ತುವನ್ನೂ ಈ ಮೊದಲು ಮಾರಲಿಕ್ಕೆ ಕೊಟ್ಟಿಲ್ಲ. ಸಂಬಳಕ್ಕಾಗಿ ದುಡಿಯುತ್ತಿರುವಾಗ, ತನ್ನ ಸಂಬಳದಲ್ಲಿಯ ಬಹುಭಾಗವನ್ನೇ ಮಗುವಿಗಾಗಿ ವೆಚ್ಚಮಾಡುತ್ತಿದ್ದಳು. ಈಗ ಆಕೆ ಸಂಬಳವಿಲ್ಲದೆ ದುಡಿದರೂ, ಮಗುವನ್ನು ಮೊದಲಿಗಿಂತ ಹೆಚ್ಚಾದ ಲಾಲನೆ ಪಾಲನೆಗಳಿಂದ ನೋಡುತ್ತ ಬಂದಿದ್ದಾಳೆ. ಇಂದು ಇದನ್ನೇಕೆ ಮಾರಿದಳು? ಆಕೆಯೇ ಸ್ವತಃ ಹೀಗೆ ಮಾಡಿರದ ವಿನಃ ಹರನಾಥನು ಎಂದೂ ಚಾಡಿ ಹೇಳುವಷ್ಟು ಧೈರ್ಯಮಾಡಲಾರನು; ಎಷ್ಟೋ ರೀತಿಯ ವಿಚಾರಗಳು ನೃಪೇಶನ ತಲೆಯಲ್ಲಿ ಸುಳಿದಾಡಿದವು; ಅವನಿಗೆ ಏನು ಮಾಡುವದೆಂಬುದೇ ತಿಳಿಯದಾಯಿತು. ಹರನಾಥನನ್ನೇ ಪುನಃ ಕೇಳಿದ

"ನಿಶ್ಚಯವಾಗಿಯೂ ಆಕೆ ಕೊಟ್ಟು ಬಂದಿದ್ದಾಳೆಯೇ?"

"ಸುಳ್ಳಾಗಿದ್ದರೆ, ನಾನು ಹೇಳುತ್ತಲೇ ಇರುತ್ತಿರಲಿಲ್ಲ. ಆಕೆಯ ವಿಷಯವಾಗಿ ಸುಳ್ಳೊಂದು, ಸೊಟ್ಟೊಂದು ಹೇಳಲಿಕ್ಕೆ ಆಕೆಯೇನೂ ನನ್ನ ವೈರಿಯಲ್ಲ. ನಾವಿಬ್ಬರೂ ಕೂಡಿಯೇ ಎಷ್ಟೋ ವರ್ಷ ಕೆಲಸಮಾಡಿದ್ದೇವೆ."

ನೃಪೇಶ ಆಯಳನ್ನು ಕರೆದು ಕೇಳಿದ. ಆಕೆಯೂ ಒಪ್ಪಿಕೊಂಡಳು. ನೃಪೇಶನಿಗೆ ಇನ್ನೂ ಹೆಚ್ಚಾದ ಸಂಕಟಕ್ಕೆ ಇಕ್ಕಿಕೊಂಡಿತು. ಆಕೆಗೆ ಏನು ಮಾಡಬೇಕು? ಪೋಲೀಸರಿಗಂತೂ ಆಕೆಯನ್ನು ಒಪ್ಪಿಸುವ ವಿಚಾರವೇ ಇಲ್ಲ. ಆಕೆ ದುಡಿದ ಗಂಟಿನಲ್ಲಿ ಒಂದು ಅರ್ಧ ಡಜನ್ನ ಸಾಯಕಲ್ಲುಗಳಾದರೂ ಬರಬಹುದು. ಆಕೆಗೆ ರೂಪಾಯಿಗಳ ಅಡಚಣೆಯಾಗಿರಬೇಕು; ಅಂತೆಯೇ ಹಾಗೆ ಮಾಡಿದ್ದಾಳೆ. ತಾನಾದರೂ ಆಕೆಗೆ ಒಂದು ದುಡ್ಡು ಕೊಟ್ಟಿಲ್ಲ. ಜಗತ್ತು ವೆಚ್ಚಕ್ಕಾದರೂ ಒಂದು ಕಾಸು ಸಹಿತ ಕೊಟ್ಟಿಲ್ಲ. ಆಕೆಯ ಮೇಲೆ ಕಳವಿನ ಅಪರಾಧ ಹೊರಿಸಿ ನ್ಯಾಯಾಸ್ಥಾನದಲ್ಲಿ ನಿಲ್ಲಿಸಿದ್ದುದಾದರೆ ಅವನೇ ಹೆಚ್ಚಾಗಿ ತಪ್ಪುಗಾರನಾಗುತ್ತಿದ್ದನು. ಆಕೆಯನ್ನು ಕೆಲಸದಿಂದ ಬಿಡಿಸಿ ಮನೆಬಿಟ್ಟು ಹೋಗೆಂದು ಹೇಳಲು ಅವನಿಗೆ ಮನಸ್ಸಿಲ್ಲ. ಆಕೆ ಹೋದರೆ ಯಾರು ಮಗುವಿನ ಲಾಲನೆ ಪಾಲನೆ ಮಾಡಬೇಕು? ಆಕೆಗೆ ಯೋಗ್ಯಪಾಠವನ್ನು ಕಲಿಸಲೇ ಬೇಕು. ಸುಮ್ಮನೆ ಬಿಟ್ಟರೆ ಊಳಿಗದವರು ಆಕೆಯನ್ನೇ ಅನುಸರಿಸುವರು.

ಅದನ್ನೂ ನೃಪೇಶ ಮಾಡದಾದನ. ಆಕೆಯನ್ನು ಯಾರೂ ಊಳಿಗದವಳೆಂದು ತಿಳಿದಿರಲಿಲ್ಲ. ಆಕೆಯೊಬ್ಬ ಮನೆಯವಳಂತೆಯೇ ಇದ್ದಳು. ಹಾಗೆಯೇ ಸ್ವಲ್ಪ ಸಿಟ್ಟುಮಾಡಿ ಬಿಡಬೇಕೆಂದರರೂ ಆತನಿಂದ ಸಿಟ್ಟುಮಾಡುವದು ಆಗಲಿಲ್ಲ. ಕೊನೆಗೊಮ್ಮೆ ಧೈರ್ಯಮಾಡಿ ಇಷ್ಟು ಆಕೆಗೆ ಹೇಳಬೇಕಾದರೆ ಅವನಿಗೆ ಸಾಕುಬೇಕಾಯಿತು.

"ಇನ್ನೆಂದೂ ಈ ರೀತಿ ಮಾಡಬೇಡ. ದುಡ್ಡುಬೇಕಾದರೆ ನನ್ನನ್ನು ಕೇಳು."

ಹರನಾಥ ಪತ್ರಿಕೆ ತರುವ ಕಲ್ಲಿಯನ್ನು ಕೈಯಲ್ಲಿ ಹಿಡಿದುಕೊಂಡು ಆಯಳಿಗೆ ಯಾವ ಶಿಕ್ಷೆ ವಿಧಿಸಲ್ಪಡುವದೆಂಬುದನ್ನು ಆಲಿಸಲು ಹೊರಗೆ ನಿಂತಿದ್ದನು. ಅವನಿಗೆ ಸಿಟ್ಟುಬಂತು. "ಒಡೆಯರೇಕೆ ಆ ಅಪರಾಧಮಾಡಿದ ಹೆಣ್ಣಿಗೆ ಹತ್ತುರೂಪಾಯಿ ಕಾಣಿಕೆಹೋಗಿ ಕೊಡಬೇಕು? ಆಕೆ ಮಾಡಿದ್ದಾದರೂ ಯಾವ ಸಾಹಸದ ಕೆಲಸ?" ಎಂದು ಒಟಗುಟ್ಟುತ್ತ ನಡೆದನು. ಹರನಾಥ ಹೋದ ಮೇಲೆ ಆಯಳು ಕೇಳಿದಳು.

"ಬಾಬುಗಳೇ, ನಾನು ಹೋಗುತ್ತೇನೆ ಇನ್ನು ನಾನಿಲ್ಲಿ ಕೆಲಸಕ್ಕೆ ಇರಲಾರೆ; ಟ್ರಾಯಿಸಿಕಲ್ಲ ತಿರುಗಿಕಳಿಸುತ್ತೇನೆ"

ನೃಪೇಶನಿಂದ ಅಪ್ಪಣೆಯನ್ನೂ ಅಪೇಕ್ಷಿಸದೆ, ವ ತ್ತು ಖೋಕಾನ ಕಡೆಗೆ ಒಂದಿಷ್ಟಾದರೂ ನೋಡದೆ ಆಯಾ ಮನೆಯಿಂದ ಹೋಗಿಬಿಟ್ಟಳು. ನೃಪೇಶ ಆಕೆಯನ್ನು ಹಿಂದಕ್ಕೆ ಕರೆತರಲು ಹರನಾಥನನ್ನು ಹಿಂದಿನಿಂದ ಕಳಿಸಿದರೂ ಸಾಧ್ಯವಾಗಲಿಲ್ಲ ಆಕೆ ಅಷ್ಟರಲ್ಲಿ ಎಲ್ಲಿಯೋ ಕಣ್ಮರೆಯಾಗಿದ್ದಳು.

ಇಬ್ಬರೂ ಕೂಡಿ ಹುಡುಗನನ್ನು ಹೇಗೂ ನೋಡುತ್ತ ಬಂದರು. ನೃಪೇಶನು ಕಚೇರಿಯ ಕೆಲಸಕ್ಕೆ ತಿಲಾಂಜಲಿಕೊಡಬೇಕಾಯಿತು ಯಾವ ಟ್ರಾಯಿಸಿಕಲ್ಲಿನಿಂದ ಇಷ್ಟೆಲ್ಲ ಆಗಿತ್ತೊ ಅದನ್ನು ಒಬ್ಬ ಮದ್ರಾಸಿ ಹುಡುಗ ತಂದು ಮನೆಯಲ್ಲಿ ಬಿಟ್ಟ; ಆ ಹುಡುಗನಿಗೂ ಹೆಚ್ಚಾಗಿ ಆಯಳ ವಿಷಯ ತಿಳಿದಿರಲಿಲ್ಲ. ನಸುಕಿನಲ್ಲಿ ಆಕೆ ತಂದು ಇಟ್ಟಿದ್ದಳೆಂದೂ, ಈಗ ಸ್ವಲ್ಪ ಸಮಯ ಮೊದಲು ತಿರುಗಿ ಇಲ್ಲಿಗೆ ತೆಗೆದುಕೊಂಡು ಹೋಗಿಬಿಟ್ಟು ಬರುವದಾಗಿ ತಿಳಿಸಿದಳೆಂದೂ ಹೇಳಿದ ಆದರೆ ಆಕೆ ಎಲ್ಲಿಗೆ ಹೋದಳೆಂಬುದು ಅವನಿಗೂ ತಿಳಿದಿರಲಿಲ್ಲ

ದಿನಗಳಮೇಲೆ ದಿನಗಳು ಉರುಳಿದವು; ಖೋಕಾನ ಕಿರುಕುಳಕ್ಕೆ ಕೊನೆಮೊದಲೇ ಇಲ್ಲ, ನೃಪೇಶನಿಗೆ ತಲೆಬೇಸರಬಿಟ್ಟಿತು; ಆಯಳ ಸುಳಿವೇ ಇಲ್ಲ, ಹರನಾಥನೊಬ್ಬನಿಗೇ ಮನೆಕೆಲಸಗಳೆಲ್ಲವನ್ನೂ ತೂಗಿಸಿಕೊಂಡು ಹೋಗುವದು ಆಗುತ್ತಿರಲಿಲ್ಲ; ಮತ್ತೊಬ್ಬ ಒಕ್ಕಲುಗಿತ್ತಿಯನ್ನು ನೇಮಿಸಿದ್ದಾಯಿತು, ಆದರೂ ಕೆಲಸ ಚೆನ್ನಾಗಿ ಸಾಗಲಿಲ್ಲ; ಇಷ್ಟು ದಿವಸ ಮೌನದಿಂದಿದ್ದ ಮನೆಯು ಅವರಿಬ್ಬರ ನಿತ್ಯ ಜಗಳದಿಂದ ಈಗ ಕಳೆಯೇರಿತು.

ಬಹಳಮಾಡಿ ಒಂದು ವರ್ಷ ಉರುಳಿರಬಹುದು ಖೋಕಾ ನೃಪೇಶನ ತೊಡೆಯಮೇಲೆ ಕೂತಿದ್ದಾನೆ ನೃಪೇಶನು ತನ್ನ ಕೆಲಸಮಾಡಲು ಎಷ್ಟು ಪ್ರಯತ್ನಿಸುತ್ತಿದ್ದರೂ ವ್ಯರ್ಥವಾಗುತ್ತಿತ್ತು ಹರನಾಥ ಬಂದು, ಒಬ್ಬ ಮನುಷ್ಯ ತಮ್ಮನ್ನು ಕಾಣುವದಕ್ಕಾಗಿ ಅಪೇಕ್ಷಿಸುವನೆಂದು ತಿಳಿಸಿದನು ನೃಪೇಶ ಆ ಮನುಷ್ಯನನ್ನು ಒಳಗೆ ಬರಲಿಕ್ಕೆ ಹೇಳೆಂದು ಹೇಳಿದ ಒಬ್ಬ ಮುದುಕ ಚೀನಿ ಮನುಷ್ಯನನ್ನು ಹರನಾಥ ಕರೆದುತಂದ ಆಶ್ಚರ್ಯಚಕಿತನಾಗಿ ನೃಪೇಶ ಮನುಷ್ಯನ ಕಡೆಗೆ ನೋಡಿದ, ತನ್ನೊಂದಿಗೆ ಈ ಮನುಷ್ಯನದೇನು ಕೆಲಸವಿರುವದೆಂಬುದು ಅವನಿಗೆ ತಿಳಿಯಲಿಲ್ಲ.

ಕೇಳಿದಮೇಲೆಯೇ ಆ ಮನುಷ್ಯನು ಹರಕುಮುರಕು ಇಂಗ್ಲೀಷಿನಲ್ಲಿ ಹೇಳಿದ

"ಸಮೀಪದಲ್ಲಿ ನನ್ನದೊಂದು ಸರಾಫಿ ಅಂಗಡಿಯಿದೆ. ಈ ಪತ್ರವನ್ನು ಕೊಟ್ಟ ಹೆಣ್ಣುಮಗಳು, ಕೆಲವು ದಿನಗಳ ಕೆಳಗೆ ನನ್ನಲ್ಲಿ ಒಂದು ಕೊರಳ ಭಂಗಾರದ ಹಾರವನ್ನು ಅಡವಿಟ್ಟಿದ್ದಳು ಈಗ ನನಗೆ ರೂಪಾಯಿಗಳ ಅಗತ್ಯವಿದೆ. ಆದ್ದರಿಂದಲೇ ಮನೆಗೆ ಬರಬೇಕಾಯಿತು ಅಸಲು ಬಡ್ಡಿ ಕೊಟ್ಟರೆ ಅವಳ ಹಾರ ಅವಳಿಗೆ ಕೊಡುವ; ಇಲ್ಲದಿದ್ದರ ಹೇಗೂ ಗೊತ್ತು ಮಾಡಿದ ಅವಧಿ ಮುಗಿದಂತಾಗಿದೆ. ಬೇರೆ ಕಡೆಗೆ ಮಾರುವೆ"

ನೃಪೇಶ ಯಾವ ದಿನಾಂಕದ ದಿನ ಆ ಹೆಣ್ಣು ವಗ ರೂಪಾಯಿ ಸಾಲ ತಂದಿದ್ದಳೆಂದು ಕೇಳಿದ. ಆ ಮುದುಕ ಚೀನಿಯವ ಸರಿಯಾದ ದಿನಾಂಕ ಹೇಳಿದ.

ನೃಪೇಶನಿಗೆ ಈಗ ಪ್ರತಿಯೊಂದೂ ತಿಳಿದುಬಂತು, ಶೋಕಾಸನ್ನು ಸಮಾಧಾನ ಪಡಿಸಲು ಟ್ರೈಸಿಕಲ್ಲಿಗಾಗಿ, ಹುಡುಗನ ಸತ್ತತಾಯಿ ದುಡ್ಡು ಕೊಟ್ಟಿರಲಿಲ್ಲ, ಆದರೆ ಸಾಕು ತಾಯಿ ಕೊಟ್ಟಿದ್ದಳು. ಅವನಿಗೆ ಆ ಭಂಗಾರದ ಹಾರದ ಗುರುತಿತ್ತು ಅದು ಆಯುಳದಾಗಿತ್ತು. ವಿನೋದಿನಿ ಇನ್ನೂ ಜೀವಂತಳಾಗಿರುವಾಗ ಎಷ್ಟೋ ಸಲ ಆಯ ಅದನ್ನು ವಿನೋದಿನ ಬಿಳಿಯ ಕುತ್ತಿಗೆಗೆ ಹಾಕಿ ಎಷ್ಟು ಸುಂದರವಾಗಿ ಕಾಣುತ್ತದೆಂದು ಆನಂದ ಪಟ್ಟಿದ್ದಳು; ಆಕೆ ಯಾವಾಗಲೂ ಶೋಕಾನ ಮದುವಣ ತ್ತಿಗೆ ಇದು ಕಾಣಿಕೆಯೆಂದು ಅನ್ನುತ್ತಿದ್ದಳು.

ನೃಪೇಶ ಆ ಚೀನಿಯುವನನ್ನು, ಅವಳು ಇಲ್ಲ ಕೆಲಸಕ್ಕೆ ಇರಲಿಲ್ಲವೆಂದೇ ಹೇಳಿ, ಕಳಿಸಿಬಿಟ್ಟನು.

ದಿನಗಳಮೇಲೆ ದಿನಗಳು ಉರುಳುತ್ತಿದ್ದವು; ಮನೆಯ ವಾತಾವರಣ ಹೆಚ್ಚಾಗಿ ಗಂಭೀರವಾಗುತ್ತ ನಡೆದಿತ್ತು; ಪ್ರೇಮಬುಗ್ಗೆಯು ಸೆಲೆಗಟದಿತ್ತು. ಮನೆಯಲ್ಲಿ ಪ್ರೇಮಪುತ್ಥಳಿ, ವಾತ್ಸಲ್ಯದ ಮೂರ್ತಿಗಳಾಗಿದ್ದ ಗಲ್ಲಿ ಒಬ್ಬಳನ್ನು ದೇವರು ತಕ್ಕೊಂಡುಹೋಗಿದ್ದ; ಇನ್ನೊಬ್ಬಳು ವಿಚಿತ್ರ ವೇಶದ ಹಿನ್ನೆಲೆಯಲ್ಲಿ ಕಾಣಳಾಗಿದ್ದಳು. ನೃಪೇಶನಿಗೆ ಆಕೆಯ ವಿಷಯ ವಾಗಿ ಒಂದು ಸ್ವಲ್ಪವೂ ಸುದ್ದಿ ದೊರೆಯಲಿಲ್ಲ

---